


ಕರ್ನಾಟಕ ಸರ್ಕಾರ
ಉನ್ನತ ಶಿಕ್ಷಣ ಇಲಾಖೆ
ಮತ್ತು
ಕರ್ನಾಟಕ ಜ್ಞಾನ ಆಯೋಗ




# ಕರ್ನಾಟಕ ಯುವಜನಾಂಗದ ದೃಷ್ಟಿಕೋನ, ಆಕಾಂಕ್ಷೆಗಳು, ನಿರೀಕ್ಷೆಗಳು ಮತ್ತು ಮನೋವೃತ್ತಿಯ ಅಧ್ಯಯನ





ಡಿ. ವಿ. ಸದಾನಂದ ಗೌಡ
ಮುಖ್ಯಮಂತ್ರಿ
ಸಿಎಂ/ಪಿಎಸ್/11/11



ವಿಧಾನ ಸೌಧ
ಬೆಂಗಳೂರು - ೫೬೦ ೦೦೧

ದಿನಾಂಕ ...೨/೯/೧೧.......

## ಸಂದೇಶ

ನಮ್ಮ ರಾಜ್ಯದ ಭವಿಷ್ಯವನ್ನು ಪ್ರತಿನಿಧಿಸುವ ಕರ್ನಾಟಕದ ಯುವಜನತೆಯನ್ನು ನಾನು ತುಂಬು ಹೃದಯದಿಂದ ಗೌರವಿಸುತ್ತೇನೆ. ಯುವ ಜನರ ದೃಷ್ಟಿಕೋನ ಹಾಗೂ ಆಕಾಂಕ್ಷೆಗಳನ್ನು ಅರಿತು ನನ್ನ ಮನ ತುಂಬಿ ಬಂದಿದೆ. ಪೋಷಕರಿಗೆ ಗೌರವ ಭಾವನೆ ತೋರಿರುವ ಹಾಗೂ ಸಾಮಾಜಿಕ ಮೌಲ್ಯಗಳಿಗೆ ಬೆಲೆ ನೀಡಿರುವ ರಾಜ್ಯದ ಯುವಜನತೆ ನಮ್ಮನ್ನು ಹೆಮ್ಮೆಗೊಳಿಸಿದ್ದಾರೆ. ಉನ್ನತ ಶಿಕ್ಷಣವನ್ನು ಮುಂದುವರೆಸುವ ಆಕಾಂಕ್ಷೆಯನ್ನು ವ್ಯಕ್ತಪಡಿಸಿರುವುದು ನಮ್ಮ ಮಣ್ಣಿನ ಗುಣವನ್ನು ಬಿಂಬಿಸುತ್ತದೆ. ನಮ್ಮ ಆಡಳಿತದಲ್ಲಿ ಅವರು ಇಟ್ಟಿರುವ ನಂಬಿಕೆ ಹಾಗೂ ಆಕರ್ಷಿತ ಖಾಸಗಿ ಕೆಲಸಗಳಿಗವಕಾಶವಿದ್ದಾಗ್ಯೂ ಸಾರ್ವಜನಿಕ ವ್ಯವಸ್ಥೆಯಲ್ಲಿ ಕಾರ್ಯನಿರ್ವಹಿಸಲು ಆಕಾಂಕ್ಷೆ ಹೊಂದಿರುವುದು ನಿಜಕ್ಕೂ ಸಂತೋಷದಾಯಕ ವಿಚಾರವಾಗಿದೆ. ಇಂತಹ ರಾಜ್ಯದ ಯುವ ಜನತೆಯನ್ನು ಪ್ರತಿನಿಧಿಸುತ್ತಿರುವುದು ನನಗೆ ಬಹಳ ಹೆಮ್ಮೆಯ ವಿಷಯವಾಗಿದೆ.

**"ಕರ್ನಾಟಕ ಯುವ ಜನಾಂಗದ ದೃಷ್ಟಿಕೋನ, ಆಕಾಂಕ್ಷೆಗಳು, ನಿರೀಕ್ಷೆಗಳು ಮತ್ತು ಮನೋವೃತ್ತಿಯ ಅಧ್ಯಯನ"**ವು ನಮ್ಮ ಯುವಜನತೆಯ ಸಾಮರ್ಥ್ಯವನ್ನು ಪ್ರತಿಬಿಂಬಿಸುತ್ತದೆ. ಸಾರ್ವಜನಿಕ ವ್ಯವಸ್ಥೆಯಲ್ಲಿ ಯುವಜನತೆಯನ್ನು ಮುಂಚೂಣಿಗೆ ತರುವ ಪ್ರಾಮಾಣಿಕ ಪರಿಶ್ರಮವನ್ನು ಸರ್ಕಾರವು ನಡೆಸುತ್ತದೆ. ಕರ್ನಾಟಕ ಜ್ಞಾನ ಆಯೋಗವು ಮಂಡಿಸಿರುವ ನೀತಿ ನಿರೂಪಣಾ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸಲು ಮನಃಪೂರ್ವಕ ಪ್ರಯತ್ನವನ್ನು ಮಾಡಲಾಗುವುದು.

ಈ ಅಧ್ಯಯನವು ಯುವಜನ ಹಾಗೂ ಸರ್ಕಾರದ ನಡುವೆ ಒಂದು ಸೇತುಬಂಧವಾಗಿದೆ ಎಂದು ನಾನು ಪರಿಗಣಿಸುತ್ತೇನೆ. ನವೀನ ಕಾರ್ಯ ನೀತಿಗಳ ಮೂಲಕ ಯುವ ಜನಾಂಗದ ಆಕಾಂಕ್ಷೆಗಳಿಗೆ ಗರಿ ಮೂಡಿಸುವ ದಿಶೆಯಲ್ಲಿ ಸರ್ಕಾರವು ಮುನ್ನಡೆಸುತ್ತದೆ. ಡಾ. ಕೆ. ಕಸ್ತೂರಿರಂಗನ್‌ರವರ ದಕ್ಷ ನಾಯಕತ್ವದಡಿಯಲ್ಲಿ ಕರ್ನಾಟಕ ಜ್ಞಾನ ಆಯೋಗವು ನಿರ್ವಹಿಸಿರುವ ಕಾರ್ಯಗಳನ್ನು ನಾನು ಶ್ಲಾಘಿಸುತ್ತೇನೆ.

(ಡಿ.ವಿ. ಸದಾನಂದಗೌಡ)



ಮುನ್ನುಡಿ

"ಕರ್ನಾಟಕ ಯುವ ಜನಾಂಗದ ದೃಷ್ಟಿಕೋನ, ಆಕಾಂಕ್ಷೆಗಳು, ನಿರೀಕ್ಷೆಗಳು ಮತ್ತು ಮನೋವೃತ್ತಿಯ ಅಧ್ಯಯನ" ದ ವರದಿಯನ್ನು ಮಾನ್ಯ ಮುಖ್ಯಮಂತ್ರಿಗಳಿಗೆ ಸಮರ್ಪಿಸಲು ನನಗೆ ಬಹಳ ಸಂತಸವಾಗುತ್ತಿದೆ. ಈ ಅಧ್ಯಯನವು ಕರ್ನಾಟಕದ ಯುವ ಜನತೆಯು ಪ್ರಪಂಚವನ್ನು ಅರಿಯಲು ಕರ್ನಾಟಕ ಜ್ಞಾನ ಆಯೋಗವು ನಡೆಸಿರುವ ಒಂದು ನಮ್ರ ಪ್ರಯತ್ನವಾಗಿದೆ. ಯುವ ಜನತೆಯು ತಮ್ಮ ಸುತ್ತಲಿನ ಪರಿಸರವನ್ನು ಹೇಗೆ ಗ್ರಹಿಸುತ್ತಾರೆ ಹಾಗೂ ಅವರು ಸಾಧಿಸಲಿಚ್ಛಿಸುವ ಆಕಾಂಕ್ಷೆಗಳೇನು ಎಂಬುದನ್ನು ಖಚಿತ ಪಡಿಸಿಕೊಳ್ಳಲು ಈವರೆಗೂ ನಮ್ಮ ದೇಶದ ಯಾವುದೇ ಸಂಸ್ಥೆಯು ಈ ರೀತಿಯ ಬೃಹತ್ ಸಮೀಕ್ಷಾಧಾರಿತ ಅಧ್ಯಯನವನ್ನು ನಿಯೋಜಿಸಿಲ್ಲ. ಈ ಅಧ್ಯಯನವು ವಿವಿಧ ಸಾಮಾಜಿಕ–ರಾಜಕೀಯ–ಆರ್ಥಿಕ ಅಂಶಗಳ ಬಗ್ಗೆ ಯುವ ಜನತೆಯ ದೃಷ್ಟಿಕೋನಗಳನ್ನು ಗ್ರಹಿಸಿದೆ. ಅಷ್ಟೇ ಅಲ್ಲದೆ ಸಮಾಜದಿಂದ ಅವರ ಅಪೇಕ್ಷಿತ ಆಕಾಂಕ್ಷೆಗಳು ಹಾಗೂ ನಿರೀಕ್ಷೆಗಳೇನೆಂಬುದನ್ನು ಸೆರೆಹಿಡಿದಿದೆ. ಅಧ್ಯಯನದಲ್ಲಿ ಹೊರಬಂದಿರುವ ಯುವಜನರ ಮಹತ್ವಾಕಾಂಕ್ಷೆಗಳು ಬದಲಾಗುತ್ತಿರುವ 21ನೆಯ ಶತಮಾನದ ರೀತಿಗೆ ಸಮಂಜಸವಾಗಿದೆ.

ನಮ್ಮ ಎಲ್ಲಾ ಕಾರ್ಯಗಳಿಗೂ ಮಾನ್ಯ ಮುಖ್ಯಮಂತ್ರಿಗಳು ನೀಡುತ್ತಿರುವ ಬೆಂಬಲಕ್ಕೆ ನಾನು ಕೃತಜ್ಞತೆ ಸಲ್ಲಿಸುತ್ತೇನೆ. ನಮ್ಮೆಲ್ಲಾ ಪ್ರಯತ್ನಗಳಿಗೂ ಸಹಕಾರ ನೀಡಿರುವ ಎಲ್ಲಾ ಸಚಿವರು ಹಾಗೂ ಕಾರ್ಯದರ್ಶಿಗಳಿಗೆ ನನ್ನ ವಂದನೆಗಳು. ಈ ಅಧ್ಯಯನಕ್ಕೆ ಕೇಂದ್ರ ಬಿಂದುಗಳಾಗಿದ್ದ ಕರ್ನಾಟಕದ ಯುವಜನತೆಯನ್ನು ನಾನು ಸ್ಮರಿಸುತ್ತೇನೆ ಹಾಗೂ ಅವರ ಸಕ್ರಿಯ ಮತ್ತು ದಿಟ್ಟ ಭಾಗವಹಿಸುವಿಕೆಗೆ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಈ ಅಧ್ಯಯನವು ಕರ್ನಾಟಕದ ಯುವ ಜನತೆಗೆ ಒಂದು ನವಯುಗವನ್ನು ತೆರೆಯಲಿ ಎಂದು ಹಾರೈಸುತ್ತೇನೆ.

**ಡಾ.ಕೆ. ಕಸ್ತೂರಿರಂಗನ್,**

ಅಧ್ಯಕ್ಷರು,

ಕರ್ನಾಟಕ ಜ್ಞಾನ ಆಯೋಗ



ಡಾ॥ ವಿ.ಎಸ್. ಆಚಾರ್ಯ
ಉನ್ನತ ಶಿಕ್ಷಣ, ಯೋಜನೆ, ಸಾಂಖ್ಯಿಕ,
ಮುಜರಾಯಿ, ಮಾಹಿತಿ ತಂತ್ರಜ್ಞಾನ ಮತ್ತು
ಜೈವಿಕ ತಂತ್ರಜ್ಞಾನ ಸಚಿವರು



ದೂರವಾಣಿ : ಕಛೇರಿ : 22252536
22033450
ಕಛೇರಿ : 22371150
ಕೊಠಡಿ ಸಂಖ್ಯೆ: 315, 3ನೇ ಮಹಡಿ
ವಿಧಾನ ಸೌಧ, ಬೆಂಗಳೂರು–560 001

ಸಂಖ್ಯೆ:ಉಶಿಯೋಸಾಮುಮಾಜೈಸ: 1838/11

ದಿನಾಂಕ : 25:07:2011

## ಸಂದೇಶ

"ಕರ್ನಾಟಕ ಯುವ ಜನಾಂಗದ ಆಕಾಂಕ್ಷೆಗಳು, ನಿರೀಕ್ಷೆಗಳು ಮತ್ತು ಮನೋವೃತ್ತಿಯ ಅಧ್ಯಯನ" ದಿಂದ ತಿಳಿದು ಬಂದಿರುವ ಅಂಶಗಳು ನನಗೆ ಬಹಳ ತೃಪ್ತಿಯನ್ನುಂಟುಮಾಡಿದೆ. ಯುವ ಜನರು ವಿಶ್ವವನ್ನು ಅರಿತು ಯುವ ಜನರ ಕಲ್ಯಾಣಕ್ಕಾಗಿ ನೀತಿ ನಿಯಮಗಳನ್ನು ರೂಪಿಸುವುದು ಒಂದು ಅವಿರತ ಸವಾಲೇ ಸರಿ. ಈ ಅಧ್ಯಯನವು ಯವ ಜನರ ಅಕಾಂಕ್ಷೆ ಹಾಗೂ ನಿರೀಕ್ಷೆಗಳ ಬಗ್ಗೆ ಸಾಕಷ್ಟು ಮಾಹಿತಿಯನ್ನು ನೀಡಿದೆ. ಯುವ ಜನಾಂಗವು ಉನ್ನತ ಶಿಕ್ಷಣವನ್ನು ಮುಂದುವರಿಬೇಕೆಂಬ ಇಚ್ಛೆಯನ್ನು ವ್ಯಕ್ತಗೊಳಿಸಿರುವುದು ನಿಜಕ್ಕೂ ಶ್ಲಾಘನೀಯ.

ನಮ್ಮ ಯುವಜನರ ದೃಷ್ಟಿಕೋನ, ಆಕಾಂಕ್ಷೆಗಳು, ನಿರೀಕ್ಷೆಗಳು ಹಾಗೂ ಮನೋವೃತ್ತಿಗಳು ಒಟ್ಟಾಗಿ ಒಂದು ಅಭಿವೃದ್ದಿಶೀಲ ಸಮಾಜದ ಗುಣವನ್ನು ಪ್ರತಿಬಿಂಬಿಸುತ್ತಿದೆ ಎಂಬ ಅಂಶವು ಆಶಾದಾಯಕವಾಗಿದೆ. ತಮ್ಮ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳುವುದರಲ್ಲಿ ಯಾವುದೇ ಸವಾಲುಗಳು ನಮ್ಮ ಯುವಜನರನ್ನು ಹಿಂತಡೆಯಲು ಸಾಧ್ಯವಿಲ್ಲ ಎಂಬುದರಲ್ಲಿ ಯಾವುದೇ ಸಂಶಯವಿಲ್ಲ.

[ಡಾಃ ವಿ.ಎಸ್.ಆಚಾರ್ಯ]



**S.V. RANGANATH**
CHIEF SECRETARY
ಮುಖ್ಯ ಕಾರ್ಯದರ್ಶಿ



ಕರ್ನಾಟಕ ಸರ್ಕಾರ
GOVERNMENT OF KARNATAKA

ವಿಧಾನ ಸೌಧ ಬೆಂಗಳೂರು - 560 214
**# 320, 3rd Floor, Vidhana Soudha**
**Bangalore - 560 214**
*e-mail : cs@karnataka.gov.in*
*cskarnataka@gmail.com*
Phone : Off: +91 80 22252442 / 22253716
Fax : +91 80 22258913

D.O.No. ಮು.ಕಾ./ 445 /2011
Date : 23-07-2011

**ಸಂದೇಶ**

**"ಕರ್ನಾಟಕ ಯುವ ಜನಾಂಗದ ದೃಷ್ಟಿಕೋನ, ಆಕಾಂಕ್ಷೆಗಳು, ನಿರೀಕ್ಷೆಗಳು ಮತ್ತು ಮನೋವೃತ್ತಿಯ ಅಧ್ಯಯನ"** ದಿಂದ ಕಂಡು ಬಂದಿರುವ ಅಂಶಗಳನ್ನು ಅರಿತು ನನಗೆ ಬಹಳ ಸಂತಸವಾಗುತ್ತಿದೆ.

ಯುವ ಪೀಳಿಗೆಯು ಬಡತನ ಹಾಗೂ ಅಸಮಾನತೆಯ ನಿರ್ಮೂಲನೆಗಾಗಿ ಸಕ್ರಿಯ ಉತ್ಸಾಹ ತೋರಿಸುತ್ತಿರುವುದು ನನಗೆ ಅತ್ಯಂತ ಸಂತೋಷವನ್ನುಂಟುಮಾಡಿದೆ. ಉನ್ನತ ಶಿಕ್ಷಣದ ಬಗ್ಗೆ ಅವರ ಕಾಳಜಿಯು ರಾಜ್ಯವನ್ನು ಜ್ಞಾನಾರ್ಜನೆಯ ಪ್ರಗತಿ ಪಥದತ್ತ ಕೊಂಡೊಯ್ಯಲಿದೆ. ಯುವ ಪೀಳಿಗೆಯ ಶ್ರೇಯೋಭಿವೃದ್ಧಿಗಾಗಿ ಸರ್ಕಾರವು ನೀತಿಯನ್ನು ಹಾಗೂ ಕಾರ್ಯಕ್ರಮಗಳನ್ನು ರೂಪಿಸುವಲ್ಲಿ ಈ ಅಧ್ಯಯನವು ಅತ್ಯಂತ ಸಹಕಾರಿಯಾಗಲಿದೆ.

ಕರ್ನಾಟಕ ಜ್ಞಾನ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರು ಈ ದಿಸೆಯಲ್ಲಿ ಸಲ್ಲಿಸಿರುವ ಅಮೋಘ ಸೇವೆಯು ಶ್ಲಾಘನಾರ್ಹವಾಗಿದ್ದು, ಅವರೆಲ್ಲರಿಗೂ ನನ್ನ ಹೃತ್ಪೂರ್ವಕ ಅಭಿನಂದನೆಗಳು.

Ranganath
[ಎಸ್. ವಿ. ರಂಗನಾಥ್]
**ಸರ್ಕಾರದ ಮುಖ್ಯ ಕಾರ್ಯದರ್ಶಿ**




**ಕರ್ನಾಟಕ ಜ್ಞಾನ ಆಯೋಗ**

(Karnataka Knowledge Commission)

ಕರ್ನಾಟಕ ಸರ್ಕಾರ



**ಪ್ರೊ. ಎಂ. ಕೆ. ಶ್ರೀಧರ್** ಪಿ.ಎಚ್.ಡಿ.
ಸದಸ್ಯ-ಕಾರ್ಯದರ್ಶಿ ಮತ್ತು ಕಾರ್ಯನಿರ್ವಾಹಕ ನಿರ್ದೇಶಕರು

ದೂ. ಸಂಖ್ಯೆ : 080-22250330
080-22033297
ಫ್ಯಾಕ್ಸ್ : 080-22342695
ಇ-ಮೇಲ್ : secy@jnanaayoga.in
ವೆಬ್‌ಸೈಟ್ : www.jnanaayoga.in

ಕೆಲವು ನುಡಿಗಳು ...

ಕರ್ನಾಟಕವನ್ನು ಸ್ಪಂದನಶೀಲ ಸಮಾಜವನ್ನಾಗಿ ಪರಿವರ್ತಿಸುವ ಹೆಗ್ಗುರಿಯನ್ನು ಸಾಧಿಸುವ ಹಾದಿಯಲ್ಲಿ ಜ್ಞಾನಾಧಾರಿತ ಸಮಾಜದ ನಿರ್ಮಾಣಕ್ಕೆ ರಾಜ್ಯದ ಯುವಜನರೊಂದಿಗೆ ಸಮಾಲೋಚಿಸುವುದು ಬಹಳ ಪ್ರಮುಖವಾದ ಅಂಶವೆಂದು ಕರ್ನಾಟಕ ಜ್ಞಾನ ಆಯೋಗವು ಮನಗಂಡಿತು. ಇದನ್ನು ಮುನ್ನಡೆಸಲು ಕರ್ನಾಟಕ ಜ್ಞಾನ ಆಯೋಗವು ನಮ್ಮ ಒಟ್ಟು ಜನಸಂಖ್ಯೆಯ ಶೇಕಡಾ 40 ಭಾಗವನ್ನು ಪ್ರತಿನಿಧಿಸುವ ಯುವಜನತೆಯ ಒಂದು ಬೃಹತ್ ಸಮೀಕ್ಷೆಯನ್ನು ನಡೆಸಲು ಯೋಜಿಸಿತು.

ಯುವಜನಾಂಗದ ದೃಷ್ಟಿಕೋನ, ಆಕಾಂಕ್ಷೆಗಳು, ನಿರೀಕ್ಷೆಗಳು ಹಾಗೂ ಮನೋವೃತ್ತಿಯನ್ನು ಗ್ರಹಿಸುವುದು ಅಧ್ಯಯನದ ಮುಖ್ಯ ಉದ್ದೇಶವಾಗಿತ್ತು. ಚಿರಪರಿಚಿತ ಚುನಾವಣಾ ವಿಶ್ಲೇಷಣಾ ತಜ್ಞರು ಹಾಗೂ ಜೈನ್ ವಿಶ್ವವಿದ್ಯಾಲಯದ ಸಹಕುಲಪತಿಗಳಾದ ಡಾ.ಸಂದೀಪ್ ಶಾಸ್ತ್ರಿಯವರ ನೇತೃತ್ವದಲ್ಲಿ ನಮ್ಮ ದೇಶದ ಯಾವುದೇ ರಾಜ್ಯದಲ್ಲಿ ಈ ಹಿಂದೆ ನಡೆದಿಲ್ಲದಂತಹ ಅಧ್ಯಯನವನ್ನು ಕೈಗೊಳ್ಳಲಾಯಿತು.

ಈ ಕಿರುಹೊತ್ತಿಗೆಯು ಅಧ್ಯಯನ ವರದಿಯ ಸಂಕ್ಷಿಪ್ತ ರೂಪವಾಗಿದೆ. ಈ ಕಿರುಹೊತ್ತಿಗೆಯ ಪ್ರಕಟನೆಗೆ ಸ್ವತ: ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರೇ ಸಲಹೆ ನೀಡಿರುತ್ತಾರೆ. ಇದು ಕೇವಲ ಅಧ್ಯಯನದ ಅಂಶಗಳನ್ನು ಸಂಬಂಧಿಸಿದವರಿಗೆ ಮುಟ್ಟಿಸುವ ಉದ್ದೇಶವಷ್ಟೇ ಅಲ್ಲದೆ, ಯುವಜನಾಂಗದ ಧ್ವನಿಯನ್ನು ಕ್ರಿಯಾತ್ಮಕವಾಗಿ ಪರಿವರ್ತನೆಗೊಳಿಸುವ ಉದ್ದೇಶವನ್ನೂ ಒಳಗೊಂಡಿದೆ.

ಈ ವರದಿಯನ್ನು ಹಾಗೂ ಕಿರುಹೊತ್ತಿಗೆಯನ್ನು ವಾಸ್ತವತೆಗೆ ಪರಿವರ್ತಿಸುವಲ್ಲಿ ಸಹಾಯಹಸ್ತ ನೀಡಿದ ಎಲ್ಲರಿಗೂ ನನ್ನ ಧನ್ಯವಾದಗಳು. ಈ ಅಧ್ಯಯನದ ನೇತೃತ್ವ ವಹಿಸುವುದಷ್ಟೇ ಅಲ್ಲದೆ ಕಿರುಹೊತ್ತಿಗೆಯನ್ನು ಸಿದ್ಧಪಡಿಸಿದ ಡಾ. ಸಂದೀಪ್ ಶಾಸ್ತ್ರಿಯವರನ್ನು ವಿಶೇಷವಾಗಿ ಸ್ಮರಿಸುತ್ತೇನೆ ಹಾಗೂ ಅಧ್ಯಯನದಲ್ಲಿ ತೊಡಗಿಸಿಕೊಂಡ ಎಲ್ಲರಿಗೂ ನನ್ನ ಧನ್ಯವಾದಗಳು.

ಶ್ರೀ ಎಸ್. ವಿ.ರಂಗನಾಥ್, ಮುಖ್ಯ ಕಾರ್ಯದರ್ಶಿಗಳು, ಶ್ರೀಮತಿ ಲತಾ ಕೃಷ್ಣರಾವ್, ಪ್ರಧಾನ ಕಾರ್ಯದರ್ಶಿಗಳು, ಉನ್ನತ ಶಿಕ್ಷಣ ಇಲಾಖೆ, ಶ್ರೀ.ಐ.ಎಸ್.ಎನ್. ಪ್ರಸಾದ್, ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಗಳು ಹಾಗೂ ಡಾ.ಕೆ.ವಿ.ರಾಜು, ಮುಖ್ಯಮಂತ್ರಿಯವರ ಆರ್ಥಿಕ ಸಲಹೆಗಾರರು ಈ ಅಧ್ಯಯನಕ್ಕೆ ನೀಡಿದ ಬೆಂಬಲವನ್ನು ನಾನು ನೆನೆಸಲಿಚ್ಛಿಸುತ್ತೇನೆ.

ಕರ್ನಾಟಕ ಜ್ಞಾನ ಆಯೋಗದ ಅಧ್ಯಕ್ಷರಾದ ಡಾ.ಕೆ. ಕಸ್ತೂರಿರಂಗನ್ ರವರಿಗೂ ಹಾಗೂ ಎಲ್ಲಾ ಸದಸ್ಯರಿಗೂ ನನ್ನ ಮನ:ಪೂರ್ವಕ ಕೃತಜ್ಞತೆಗಳು. ಅನುಸಂಧಾನ ಸಹಯೋಗಿಗಳು ಹಾಗೂ ಆಡಳಿತ ತಂಡವೂ ಸಹ ನನ್ನ ಮೆಚ್ಚುಗೆಗೆ ಅರ್ಹರು. ಎಲ್ಲರಿಗೂ ನನ್ನ ಧನ್ಯವಾದಗಳು.

ಕೊಠಡಿ ಸಂಖ್ಯೆ 219, 2ನೇ ಮಹಡಿ, ವಿಧಾನ ಸೌಧ, ಡಾ|| ಬಿ.ಆರ್.ಅಂಬೇಡ್ಕರ್ ವೀಧಿ, ಬೆಂಗಳೂರು-560 233.



# ಪ್ರತಿಕ್ರಿಯೆದಾರರ ಕಿರು ಪರಿಚಯ

ಕರ್ನಾಟಕ ಯುವಜನಾಂಗದ ದೃಷ್ಟಿಕೋನ, ಆಕಾಂಕ್ಷೆಗಳು, ನಿರೀಕ್ಷೆಗಳು ಮತ್ತು ಮನೋವೃತ್ತಿಯ ಅಧ್ಯಯನವು, ಅವರು ಯಾವ ರೀತಿಯಲ್ಲಿ ಯೋಚಿಸುತ್ತಿದ್ದಾರೆ, ಏತಕ್ಕಾಗಿ ಆ ರೀತಿಯಲ್ಲಿ ಯೋಚಿಸುತ್ತಾರೆ ಮತ್ತು ಅವರ ಅಗತ್ಯಗಳಿಗೆ ಸಮಾಜ ಹೇಗೆ ಸ್ಪಂದಿಸುತ್ತದೆ ಎನ್ನುವುದನ್ನು ಅರ್ಥಮಾಡಿಕೊಳ್ಳಲು ಮಾಡಿದ ಅಧ್ಯಯನವಾಗಿದೆ. ಇದು ರಾಜ್ಯಮಟ್ಟದ ಮತ್ತು ನಮ್ಮ ನಾಡಿನ ವಿಶಿಷ್ಟ ಯುವಪೀಳಿಗೆಯ ದೃಷ್ಟಿಕೋನದ ಆಧಾರದ ಮೇಲೆ ಮಾಡಿದ ಮೊಟ್ಟ ಮೊದಲ ಅಧ್ಯಯನವಾಗಿದೆ.

## ಈ ಅಧ್ಯಯನದ ಉದ್ದೇಶ ಏನು?

ಬೇರೆ ದೇಶಗಳಿಗೆ ಹೋಲಿಸಿದರೆ, ಭಾರತವು ಅತ್ಯಂತ ಹೆಚ್ಚಿನ ಯುವಸಮುದಾಯವನ್ನು ಹೊಂದಿದ ದೇಶವಾಗಿದೆ. ಆ ನಿಟ್ಟಿನಲ್ಲಂತೂ ಕರ್ನಾಟಕವು ಸಮಗ್ರ ಭಾರತದ ವಿಶೇಷ ಪ್ರತಿನಿಧಿಯಂತೆಯೇ ಕಾಣುತ್ತಿದೆ. ಈ ಅಧ್ಯಯನದ ವ್ಯಾಪ್ತಿಯು ಬಹುಮುಖಿಯಾಗಿದ್ದು, ಈ ರಾಜ್ಯದ ಯುವಜನಾಂಗದ ಕಾಲಾವಧಿಯ ವಿವಿಧ ಆಯಾಮಗಳನ್ನು ಗುರುತಿಸುತ್ತದೆ. ಈ ಅಧ್ಯಯನದಲ್ಲಿ 15 ರಿಂದ 34 ವರ್ಷದೊಳಗಿನ ಯುವ ಸಮುದಾಯವನ್ನು ಒಳಗೊಳ್ಳಬೇಕೆಂದು ಉದ್ದೇಶಿಸಲಾಗಿತ್ತು. ಉದ್ದೇಶಿತ ಅಧ್ಯಯನಕ್ಕೆ ಬೇಕಾದ ಅಗತ್ಯ ಮಾಹಿತಿಯನ್ನು ಮೇಲೆ ಹೇಳಿದ ವಯೋಮಾನದವರಿಗಿಂತ ಕಡಿಮೆ ವಯಸ್ಸಿನವರಿಂದ ಪಡೆಯುವುದು ಅಷ್ಟೊಂದು ಸಮಂಜಸವಲ್ಲ ಎಂಬ ನಿರ್ಧಾರಕ್ಕೆ ಬರಲಾಯಿತು ಹಾಗೂ ಯಾವ ವಯೋಮಾನದವರನ್ನು ಯುವಜನಾಂಗ ಎಂದು ಪರಿಗಣಿಸಬೇಕು ಎಂಬುದನ್ನು ಸರಕಾರವೇ ರೂಪಿಸಿದ ಮಾನದಂಡದ ಆಧಾರದ ಮೇಲೆ ನಿರ್ಧರಿಸಲಾಗಿತ್ತು.

ಪ್ರಸ್ತುತ ಅಧ್ಯಯನವು ಈ ಕೆಳಗಿನ ಅಂಶಗಳನ್ನು ಒಳಗೊಂಡಿದೆ:

ಅ) ಕರ್ನಾಟಕದ ಯುವಜನರ ಆಕಾಂಕ್ಷೆಗಳನ್ನು ಅರ್ಥಮಾಡಿಕೊಳ್ಳುವುದು.
ಬಿ) ಈಗಿನ ಯುವ ಸಮುದಾಯದ ನಿರೀಕ್ಷೆಗಳ ಅಂದಾಜನ್ನು ಕಂಡುಕೊಳ್ಳುವುದು.
ಸಿ) ಯುವಜನರ ನಿರೀಕ್ಷೆಗಳನ್ನು ಗುರುತಿಸುವುದು ಮತ್ತು
ಡಿ) ಯುವ ಸಮುದಾಯದ ಮನೋಭಾವನೆಗಳ/ವರ್ತನೆಗಳ ಅನ್ವೇಷಣೆ.

ಈ ಮಾದರಿಯ ಪರಾಮರ್ಶೆಯ ಕಿರುಪರಿಚಯವು ಅದು ಪ್ರತಿನಿಧಿಸುವ ವಿಶಾಲ ವ್ಯಾಪ್ತಿಯನ್ನು ಪ್ರತಿಬಿಂಬಿಸುತ್ತದೆ.

**ಟೇಬಲ್ 1 : ವಯಸ್ಸು**

| ವಾಸಿಸುವ ಪ್ರದೇಶ | ಶೇಕಡಾ |
|---|---|
| 18 ಗಿಂತ ಕಡಿಮೆ | 26 |
| 18 ರಿಂದ 21 | 10 |
| 22 ರಿಂದ 25 | 17 |
| 26 ರಿಂದ 30 | 27 |
| 31 ರಿಂದ 35 | 20 |

**ಟೇಬಲ್ 2 : ಲಿಂಗ**

| ಲಿಂಗ | ಶೇಕಡಾ |
|---|---|
| ಹೆಣ್ಣು | 48 |
| ಗಂಡು | 52 |

**ಟೇಬಲ್ 3 : ವೃತ್ತಿ**

| ವೃತ್ತಿ | ಶೇಕಡಾ |
|---|---|
| ವಿದ್ಯಾರ್ಥಿ | 38 |
| ಉದ್ಯೋಗಸ್ಥ | 32 |
| ಮನೆ ನಿರ್ವಹಣೆ | 16 |
| ಉದ್ಯೋಗ | 14 |

n - 8999



ಟೇಬಲ್ 4 : ಧಾರ್ಮಿಕ

| ಧಾರ್ಮಿಕ | ಶೇಕಡಾ |
|---|---|
| ಹಿಂದು | 81 |
| ಮುಸ್ಲಿಂ | 13 |
| ಕ್ರಿಶ್ಚಿಯನ್ | 4 |
| ಇತರೆ | 2 |

n - 8999

ಟೇಬಲ್ 5 : ಸಾಮಾಜಿಕ ಆರ್ಥಿಕ ಸ್ಥಿತಿ

| ಸಾಮಾಜಿಕ ಆರ್ಥಿಕ ಸ್ಥಿತಿ | ಶೇಕಡಾ |
|---|---|
| ಅತೀ ಕಡಿಮೆ | 7 |
| ಕಡಿಮೆ | 34 |
| ಮಧ್ಯಮ | 40 |
| ಹೆಚ್ಚು | 19 |

n - 8999

ಟೇಬಲ್ 6 : ಜಾತಿ

| ಜಾತಿ | ಶೇಕಡಾ |
|---|---|
| ಪರಿಶಿಷ್ಟ ಜಾತಿ | 21 |
| ಪರಿಶಿಷ್ಟ ಪಂಗಡ | 8 |
| ಬಲಾಡ್ಯವಲ್ಲದ ಜಾತಿ | 32 |
| ಬಲಾಡ್ಯ ಜಾತಿ | 26 |
| ಮುಂದುವರೆದ ಜಾತಿ | 13 |

n - 8999

ಟೇಬಲ್ 7 : ವಾಸಿಸುವ ಪ್ರದೇಶ

| ವಾಸಿಸುವ ಪ್ರದೇಶ | ಶೇಕಡಾ |
|---|---|
| ಮೆಟ್ರೋ ನಗರ | 3 |
| ನಗರ (>1 ಲಕ್ಷ) | 11 |
| ಪಟ್ಟಣ (<1 ಲಕ್ಷ) | 20 |
| ಗ್ರಾಮ | 66 |

n - 8999

ಈ ಅಧ್ಯಯನವು ನಮ್ಮ ರಾಜ್ಯದ ಯುವ ಸಮುದಾಯದ ಮನೋಭಾವನೆಗಳನ್ನು, ಗ್ರಹಿಕೆಗಳನ್ನು ಅರ್ಥ ಮಾಡಿಕೊಳ್ಳಲು ಸಹಾಯಮಾಡುತ್ತದೆ. ಅಲ್ಲದೆ ಇದು ಸರ್ಕಾರ ಮತ್ತು ಇತರೆ ಯೋಜನೆಯನ್ನು ರೂಪಿಸುವವರಿಗೆ ಆದ್ಯತೆಗಳ ವಿಷಯಕ್ಕೆ ಸಂಬಂಧಿಸಿದಂತೆ ತಾವು ಸಂಗ್ರಹಿಸಿದ ಮಾಹಿತಿಯನ್ನು ಅರ್ಥ ಮಾಡಿಕೊಳ್ಳಲು ಸಹಕಾರಿಯಾಗಿದೆ.



# ಕುಟುಂಬ ಮತ್ತು ಸ್ನೇಹವಲಯದ ಪರಿಧಿಯಾಚೆ

**ಸಾಮಾಜಿಕ ಸಂಬಂಧಗಳು ಮತ್ತು ಕುಟುಂಬ ಹಾಗು ಸಾಮಾಜಿಕ ಸಂಪ್ರದಾಯಗಳ ಮೇಲೆ ಅವರು ಕೊಡುವ ಮಹತ್ವದ ಕಾರಣಕ್ಕಾಗಿ ಕರ್ನಾಟಕದ ಯುವಜನರು ಪರಿವರ್ತನೆಯ ಸಂಕೇತವಾಗಿದ್ದರೆ. ಸಂಪ್ರದಾಯಗಳ ವಿಚಾರವಾಗಿ ಅವರಿಗಿರುವ ಬದ್ಧತೆ ಮತ್ತು ತಮ್ಮ ಪರಂಪರೆಯ ಉತ್ತಮ ಅಂಶಗಳನ್ನು ಉಳಿಸಿಕೊಳ್ಳುವ ಅವರ ನಂಬಿಕೆಯು ಬದಲಾಗುವ ವಾಸ್ತವತೆಗೆ ಹಾಗೂ ಬದಲಾಗುವ ಕಾಲದ ಅಗತ್ಯಗಳಿಗೆ ಮಾಡಿಕೊಳ್ಳುವ ಹೊಂದಾಣಿಕೆಯಾಗಿದೆ.**

## ಯುವಜನರನ್ನು ರೂಪಿಸುವಲ್ಲಿ ಕುಟುಂಬದ ಪಾತ್ರ




ಭಾರತೀಯ ಸಮಾಜ ತನ್ನ ಪರಂಪರೆಯ ಆಳದಲ್ಲಿ 'ಕುಟುಂಬ' ವ್ಯವಸ್ಥೆಯನ್ನು ಗೌರವಿಸುತ್ತಲೇ ಬಂದಿದೆ. ರಾಜ್ಯದ ಯುವ ಸಮುದಾಯವು ಕುಟುಂಬಕ್ಕೆ ಅತ್ಯಂತ ಹೆಚ್ಚಿನ ಭಾವನಾತ್ಮಕ ಬೆಂಬಲವನ್ನು ಕೊಡುವುದು ಈ ಸಮೀಕ್ಷೆಯಿಂದ ತಿಳಿದುಬರುತ್ತದೆ. ಪ್ರತಿ ಹತ್ತು ಜನರಲ್ಲಿ ಎಂಟು ಜನ, ಜೀವನದಲ್ಲಿ ಸಂತೋಷವಾಗಿರಲು ಕುಟುಂಬದ ಅಗತ್ಯವಿದೆ ಎಂದು ಭಾವಿಸುತ್ತಾರೆ. ಹಳ್ಳಿ ಮತ್ತು ಪಟ್ಟಣಗಳಿಗೆ ಹೋಲಿಸಿದರೆ, ಮಹಾನಗರದ ಯುವಜನತೆ ಕುಟುಂಬಕ್ಕೆ ಹೆಚ್ಚು ಮಹತ್ವ ಕೊಟ್ಟಿರುವುದು ಕಂಡು ಬಂದಿದೆ. ಭಾರತದ ನಗರ ಪ್ರದೇಶವಾಸಿಗಳು ಅಥವಾ ಭಾರತೀಯರು ಕುಟುಂಬ ವ್ಯವಸ್ಥೆಯ ಮಹತ್ವವನ್ನು ಪರಿಗಣಿಸುತ್ತಿಲ್ಲ ಎಂದು ಆತಂಕಪಡುವವರ ಅನಿಸಿಕೆಯನ್ನು ಸಮಾಧಾನಗೊಳಿಸುವಂತಿದೆ.

ನಗರ ಪ್ರದೇಶದಲ್ಲಿ ವಾಸಿಸುತ್ತಿರುವ ಹೆಚ್ಚಿನ ಯುವ ಸಮುದಾಯವು ಕುಟುಂಬ ಜೀವನಕ್ಕೆ ಕೊಡುವ ಮಹತ್ವವನ್ನು ನೋಡಿದರೆ ಈ ಪ್ರದೇಶಗಳಲ್ಲಿ ಇರುವ ವಿಭಕ್ತ ಕುಟುಂಬಗಳ ವಾಸ್ತವತೆಯ ಮೇಲೆ ಬೆಳಕು ಚೆಲ್ಲಿದಂತಾಗುತ್ತದೆ. ಪರಸ್ಪರ ಪ್ರಭಾವವಿರುವ ಅವಿಭಕ್ತ ಕುಟುಂಬಗಳು ಗ್ರಾಮಾಂತರ ಪ್ರದೇಶಗಳಲ್ಲಿ ಇರುವುದು ಸಾಬೀತಾಗಿದೆ ಮತ್ತು ವಿಶಾಲ ಕುಟುಂಬ ವ್ಯವಸ್ಥೆಯ ಪ್ರಭಾವದ ಬಗ್ಗೆ ಕರ್ನಾಟಕದ ಹಳ್ಳಿಗಾಡಿನ ಯುವಜನತೆಗೆ ಇರುವ ಮನೋಭಾವ ಕೂಡು ಕುಟುಂಬದ ಬಗೆಗಿನ ಅವರ ಮನೋಭಾವಗಳಲ್ಲಿ ಪ್ರತಿಬಿಂಬಿತವಾಗಿದೆ.



# ನಿಮ್ಮ ಬಾಲ್ಯದ ಬೆಳವಣಿಗೆ ಹೇಗಿತ್ತು..ನೀವು ನಿಮ್ಮ ಮಕ್ಕಳನ್ನು ಹೇಗೆ ಬೆಳೆಸಲು ಬಯಸುತ್ತೀರಿ?




n - 8521

ಕಾಲು ಭಾಗದಷ್ಟು ಯುವಜನರು ತಮ್ಮ ಬಾಲ್ಯವು ಬಿಗುವಿನ ವಾತಾವರಣದಲ್ಲಿ ಕಳೆದುದಾಗಿ ಹೇಳಿದ್ದಾರೆ. ಅಭಿಪ್ರಾಯ ವ್ಯಕ್ತಪಡಿಸಿದ ಅರ್ಧದಷ್ಟು ಜನ ತಾವು ಅಷ್ಟೊಂದು ಕಟ್ಟುನಿಟ್ಟುಗಳಿಲ್ಲದ, ಸಹನಶೀಲ ವಾತಾವರಣದಲ್ಲಿ ಬೆಳೆದಿದ್ದಾಗಿ ಹೇಳಿಕೊಂಡಿದ್ದಾರೆ. ಇಲ್ಲಿ ತಾಯಿಯ ವಿದ್ಯಾಭ್ಯಾಸದ ಹಿನ್ನೆಲೆ ಮುಖ್ಯವಾದ ಪಾತ್ರ ವಹಿಸಿರುವುದು ತಿಳಿದುಬರುತ್ತದೆ. ತಾಯಿಯು ಹೆಚ್ಚು ವಿದ್ಯಾವಂತಳಾಗಿದ್ದಷ್ಟು ಸಾಂಪ್ರದಾಯಿಕ ಹಾಗೂ ಕಠೋರಶಿಸ್ತಿನ ವಾತಾವರಣದಲ್ಲಿ ಬೆಳೆಯುವುದು ಕಮ್ಮಿ ಎಂದು ಸಮೀಕ್ಷೆಯಿಂದ ತಿಳಿದು ಬರುತ್ತದೆ.

ಪ್ರತಿಕ್ರಿಯಿಸಿದವರಲ್ಲಿ ಮೂರು ಪ್ರತಿಶತ ಜನರು ತಮ್ಮ ಮಕ್ಕಳನ್ನು ವಿಶೇಷವಾದ ರೀತಿಯಲ್ಲಿ ಬೆಳೆಸುವುದಾಗಿ ಹೇಳಿಕೊಂಡಿದ್ದಾರೆ. ಅಷ್ಟೇನು ಕಟ್ಟುನಿಟ್ಟಿಲ್ಲದ ವಾತಾವರಣದಲ್ಲಿ ಬೆಳೆದವರು ತಮ್ಮ ಮಕ್ಕಳನ್ನು ವಿಶೇಷವಾದ ರೀತಿಯಲ್ಲಿ ಬೆಳೆಸುವುದಾಗಿ ಅಭಿಪ್ರಾಯ ಪಟ್ಟಿರುವುದು ಕಂಡುಬಂದಿದೆ. ಯುವಜನರೊಂದಿಗಿನ ಮಾತುಕತೆಯಲ್ಲಿ 'ವಿಭಿನ್ನವಾಗಿ ಬೆಳೆಸುವುದು' ಎಂಬ ಅವರ ಮಾತಿನರ್ಥ 'ಅತಿಸಲುಗೆ ಕೊಟ್ಟು ಬೆಳೆಸುವುದು' ಎಂಬ ಅರ್ಥಹೊಂದಿದೆ! ಅವರು ತಮ್ಮ ಬಾಲ್ಯದ ಅನುಭವದ ಆಧಾರದ ಮೇಲೆಯೇ ಈ ಬದಲಾವಣೆಯನ್ನು ಬಯಸಿದ್ದಾರೆ ('ಬದಲಾವಣೆಗಾಗಿ ಬದಲಾವಣೆ' ಎಂಬ ಮಾತಿನಂತೆ) ಈ ಅನುಭವವೇ ಅವರ ಮಕ್ಕಳನ್ನು ಬೇರೆಯದೇ ಆದ ರೀತಿಯಲ್ಲಿ ಬೆಳೆಸುತ್ತೇವೆಂಬ ಅಭಿಪ್ರಾಯಕ್ಕೆ ಕಾರಣವಾಗಿದೆ ಎಂದು ಹೇಳಬಹುದು. ಆದರೆ ವಾಸ್ತವದಲ್ಲಿ ಅವರು ಬದಲಾವಣೆಯನ್ನು ಬಯಸಿದಷ್ಟೂ ಅದು ಹಾಗೇ ಉಳಿಯಲಿದೆ!

## ನಿರ್ಣಯ ಕೈಗೊಳ್ಳುವ ಸ್ವಾತಂತ್ರ್ಯ




n - 8749

ಪ್ರತಿ ಹತ್ತರಲ್ಲಿ ಮೂರು ಜನ ತಮಗೆ ಸಂಬಂಧಪಟ್ಟ ಎಲ್ಲಾ ನಿರ್ಣಯಗಳನ್ನು ತಮ್ಮ ತಂದೆ-ತಾಯಂದಿರೇ ತೆಗೆದುಕೊಳ್ಳುತ್ತಾರೆ ಎಂದು ಹೇಳಿದ್ದಾರೆ. ಪ್ರತಿ ಮೂರನೇ ಎರಡರಷ್ಟು ಜನ ತಾವು ತೆಗೆದುಕೊಂಡ ನಿರ್ಣಯಗಳನ್ನು ತಂದೆತಾಯಂದಿರೊಂದಿಗೆ ಚರ್ಚಿಸಿದ ನಂತರವೇ ಸ್ವಂತ ತೀರ್ಮಾನಕ್ಕೆ ಬಂದಿದ್ದೇವೆ ಎಂದು ಹೇಳಿಕೊಂಡಿದ್ದಾರೆ. ಇದರಿಂದ ಈ ರಾಜ್ಯದ ಯುವಜನರ ಜೀವನದಲ್ಲಿ ಮತ್ತು ನಿರ್ಣಯ ತೆಗೆದುಕೊಳ್ಳುವಲ್ಲಿ ತಂದೆತಾಯಂದಿರ ಪಾತ್ರ ಮತ್ತು ಪ್ರಭಾವ ನಿಚ್ಚಳವಾಗಿದೆ ಎಂದು ತಿಳಿಯಬಹುದು. ಈ ಮೇಲೆ ವಿವರಿಸಿದ ನಿರ್ಣಯ ತೆಗೆದುಕೊಳ್ಳುವ ಅಂಶದಲ್ಲಿ ಸಹಾಯಕ ವಾಗಿರುವುದು ಮನೆಯಲ್ಲಿ ಇರಬಹುದಾದ ಪ್ರಜಾಸತ್ತಾತ್ಮಕ ಪರಿಸರವನ್ನು ಪ್ರತಿಬಿಂಬಿಸುತ್ತದೆ ಎಂದು ಹೇಳಬಹುದು. ತಾಯಿಯು ಹೆಚ್ಚು ವಿದ್ಯಾವಂತಳಾಗಿದಷ್ಟೂ ಮಕ್ಕಳು ತಮ್ಮ ಜೀವನದ ಬಗ್ಗೆ ಸ್ವತಂತ್ರ ನಿರ್ಣಯ ತೆಗೆದುಕೊಳ್ಳುವುದು ಹೆಚ್ಚು ಎಂಬುದು ಸ್ಪಷ್ಟವಾಗುತ್ತದೆ.

## ಯುವಪೀಳಿಗೆಯ ಮೇಲೆ ಯಾರು ಹೆಚ್ಚು ಪ್ರಭಾವ ಬೀರಿದ್ದಾರೆ?




n - 8853

ಪ್ರತಿ ಹತ್ತರಲ್ಲಿ ಆರರಷ್ಟು ಜನ ತಮ್ಮ ಮೇಲೆ ತಂದೆ–ತಾಯಂದಿರ ಪ್ರಭಾವ ಅತಿ ಹೆಚ್ಚು ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇನ್ನು ಪ್ರತಿಶತ ಹದಿನಾಲ್ಕು ಜನ ತಮ್ಮ ಒಡಹುಟ್ಟಿದವರ ಪಾತ್ರವನ್ನು ಗುರುತಿಸಿದ್ದಾರೆ ಮತ್ತು ಹಾಗಾಗಿಯೇ ಪ್ರತಿ ನಾಲ್ಕರಲ್ಲಿ ಮೂರರಷ್ಟು ಜನ ತಮ್ಮ ಜೀವನದಲ್ಲಿ ಒಡಹುಟ್ಟಿದವರ ಪ್ರಭಾವವೇ ಹೆಚ್ಚು ಎಂದು ಹೇಳಿಕೊಂಡಿದ್ದಾರೆ.
3

ಗ್ರಾಮೀಣ ಪ್ರದೇಶಗಳಿಗೆ ಹೋಲಿಸಿದರೆ ನಗರ ಪ್ರದೇಶಗಳಲ್ಲಿ ತಂದೆ–ತಾಯಂದಿರ ಪ್ರಭಾವ ಕಮ್ಮಿಯೇ ಎಂದು ಹೇಳಬಹುದು. ಬೆಂಗಳೂರು ಮಹಾನಗರದ ಅರ್ಧದಷ್ಟು ಜನ ತಮ್ಮ ಮೇಲೆ ತಮ್ಮ ತಂದೆ–ತಾಯಂದಿರ ಪ್ರಭಾವವೇ ಹೆಚ್ಚು ಎಂದು ಹೇಳಿದ್ದಾರೆ. ಬೆಂಗಳೂರಿನಲ್ಲಿ ಮಾತಾಡಿಸಿದ ಪ್ರತಿ ಹತ್ತು ಯುವಕರಲ್ಲಿ ಇಬ್ಬರು ತಮ್ಮ ಒಡಹುಟ್ಟಿದವರ ಪ್ರಭಾವದ ಬಗ್ಗೆ ಹೇಳಿಕೊಂಡಿದ್ದಾರೆ. ಬೆಂಗಳೂರು ಪರಿಸರದಲ್ಲಿನ ತಂದೆ–ತಾಯಂದಿರು ತಮ್ಮ ಮಕ್ಕಳ ಜೊತೆ ಕಳೆಯುವ ಒಟ್ಟು ಸಮಯ ಮತ್ತು ಯಾವ ರೀತಿಯಲ್ಲಿ ಅವರ ಜೊತೆ ಸಮಯ ಕಳೆಯುತ್ತಾರೆ ಎನ್ನುವುದರ ಪ್ರತಿಫಲಿತ ಚಿತ್ರಣವಾಗಿದೆ. ಇದಲ್ಲದೆಯೇ ನಗರ ಪ್ರದೇಶದಲ್ಲಿ ಒಡಹುಟ್ಟಿದವರು ಯಾವ ರೀತಿಯಲ್ಲಿ ಯುವಜನತೆಯ ಬೆಂಬಲವಾಗಿ ನಿಲ್ಲುತ್ತಾರೆ ಎನ್ನುವುದರ ಪ್ರತೀಕವೂ ಆಗಿದೆ.

### ಯುವಸಮುದಾಯ ಯಾರನ್ನು ನಂಬುತ್ತದೆ?

ಕರ್ನಾಟಕದ ಯುವಜನತೆಯು ತಾವು ಏರ್ಪಡಿಸಿಕೊಳ್ಳುವ ತಮ್ಮ ಹತ್ತಿರದ ಸಾಮಾಜಿಕ ಸಂಪರ್ಕಗಳಲ್ಲಿ ಯಾರನ್ನು ಹೆಚ್ಚು ನಂಬುತ್ತಾರೆ? ಅವರ ಸಾಮಾಜಿಕ ಸಂಪರ್ಕಗಳ ಪಟ್ಟಿಯಲ್ಲಿ ಸ್ನೇಹಿತರು, ಸಂಬಂಧಿಕರು, ಸಹೋದ್ಯೋಗಿಗಳು, ಶಿಕ್ಷಕರು, ತಮ್ಮದೇ ಜಾತಿಯವರು, ಅನ್ಯಜಾತಿಯವರು, ತಮ್ಮದೇ ಧರ್ಮದವರು ಹಾಗು ಅನ್ಯಧರ್ಮದವರು ಹೀಗೆ ಕೆಲವನ್ನು ಇಲ್ಲಿ ಪಟ್ಟಿ ಮಾಡಬಹುದು. ಪ್ರತಿಕ್ರಿಯೆ ವ್ಯಕ್ತಪಡಿಸಿದವರ ಸಾಮಾಜಿಕ ಸಂಪರ್ಕಗಳಲ್ಲಿ ಅವರಿಗಿರುವ ವಿಶ್ವಾಸಾರ್ಹತೆಯ ಮಟ್ಟ ಯಾರಲ್ಲಿ ಹೆಚ್ಚು ಎನ್ನುವುದನ್ನು ತಿಳಿದುಕೊಳ್ಳಲು ಒಂದರಿಂದ ಹತ್ತರ ಅಳತೆ ಪಟ್ಟಿಯಲ್ಲಿ ಪ್ರಶ್ನಿಸಲಾಯಿತು. ಕರ್ನಾಟಕದ ಯುವಜನತೆಯ ವಿಶ್ವಾಸಾರ್ಹತೆಯ ಪ್ರಪಂಚವನ್ನು ಅರಿತುಕೊಳ್ಳಲು ಈ ಪಟ್ಟಿಯು ಸಹಾಯಕವಾಗಿದೆ.




| | [illegible] | [illegible] | [illegible] | [illegible] | [illegible] | [illegible] | [illegible] | [illegible] |
|---|---|---|---|---|---|---|---|---|
| [illegible] | 4 | 5 | 14 | 7 | 10 | 24 | 18 | 16 |
| [illegible] | 4 | 6 | 8 | 11 | 14 | 19 | 28 | 27 |
| [illegible] | 15 | 17 | 10 | 25 | 36 | 19 | 19 | 29 |
| [illegible] | 77 | 72 | 68 | 57 | 40 | 38 | 35 | 28 |

n – 8117

ಮಾತನಾಡಿಸಿದ ಪ್ರತಿ ನಾಲ್ವರಲ್ಲಿ ಮೂರರಷ್ಟು ಜನ ತಮ್ಮ ವಿಶ್ವಾಸದ ಪಟ್ಟಿಯಲ್ಲಿ ಅವರವರ ಸ್ನೇಹಿತರನ್ನು ಅತಿ ಎತ್ತರದ ಸ್ಥಾನದಲ್ಲಿ ಇರಿಸಿದ್ದಾರೆ. ಮುಂದಿನ ಸ್ಥಾನದಲ್ಲಿ ಸಂಬಂಧಿಕರಿದ್ದಾರೆ. ಪ್ರತಿಕ್ರಿಯಿಸಿದ ಪ್ರತಿ ಹತ್ತು ಮಂದಿಯಲ್ಲಿ ಏಳು ಜನ ತಮ್ಮ ಸಂಬಂಧಿಕರನ್ನು ಈ ಪಟ್ಟಿಯಲ್ಲಿ ಇರಿಸಿದ್ದಾರೆ. ಸ್ನೇಹಿತರು ಮತ್ತು ಸಂಬಂಧಿಕರ ನಡುವಿನ ವಿಶ್ವಾಸಾರ್ಹತೆಯ ಮಟ್ಟವನ್ನು, ಪ್ರತಿ ಹತ್ತರಲ್ಲಿ ಒಂಬತ್ತು ಜನ ಸಮನಾಗಿ ಗುರುತಿಸಿದ್ದಾರೆ. ಪ್ರತಿಕ್ರಿಯಿಸಿದ ಪ್ರತಿ ಮೂವರಲ್ಲಿ ಇಬ್ಬರು ತಮ್ಮ ತಮ್ಮ ಶಿಕ್ಷಕರ ಬಗ್ಗೆ ವಿಶ್ವಾಸವನ್ನು ವ್ಯಕ್ತಪಡಿಸಿದ್ದಾರೆ. ಯುವಜನರ ವಿಶ್ವಾಸಾರ್ಹತೆಯ ಮಟ್ಟ ಅವರು ಏರ್ಪಡಿಸಿಕೊಳ್ಳುವ ಸಂಬಂಧಗಳ ಸ್ವರೂಪ ಮತ್ತು ಆ ಸಂಪರ್ಕಗಳ ನಿಕಟತೆಯ ಮೇಲೆ ನೇರವಾಗಿ ಅವಲಂಬಿತವಾಗಿದೆ. ವಿಶ್ವಾಸಾರ್ಹತೆಯ ಮೊದಲ ಪಟ್ಟಿಯಲ್ಲಿರುವ ಸ್ನೇಹಿತರು ಮತ್ತು ಸಂಬಂಧಿಕರ ಜೊತೆ ಅವರು ಅತಿ ಹೆಚ್ಚು ಕಾಲ ಕಳೆಯುತ್ತಾರೆ ಎಂಬುದು ಈ ಸಮೀಕ್ಷೆಯಿಂದ ತಿಳಿದುಬರುತ್ತದೆ.

ಒಚಿದು ಧರ್ಮ ಅಥವಾ ಜಾತಿಗೆ ಸೇರಿದವರು ಆಯಾ ಧರ್ಮ ಮತ್ತು ಜಾತಿಗೆ ಸೇರಿದವರನ್ನೇ ವಿಶ್ವಾಸಾರ್ಹತೆಯ ಮಟ್ಟದಲ್ಲಿ ಇಡುವುದನ್ನು ಗಮನಿಸಿದರೆ ರಾಜ್ಯದಲ್ಲಿನ ಯುವಜನತೆಯ ಮೇಲೆ ಪ್ರಚಲಿತ ಸಾಮಾಜೀಕರಣದ ಪ್ರಭಾವವನ್ನು ಗುರುತಿಸಬಹುದು. ಕರ್ನಾಟಕ ರಾಜ್ಯದಲ್ಲಿ ಕಂಡು ಬರುವ ಈ ರೀತಿಯ ಪ್ರತಿಕ್ರಿಯೆ ಅಖಿಲ ಭಾರತ ಮಟ್ಟದ ಯುವಜನತೆಯ ಅಧ್ಯಯನದಲ್ಲಿ ಗುರುತಿಸಿರುವ ಮಾದರಿಯಂತೆಯೇ ಇದೆ.

### ಸ್ನೇಹಿತರ ವಲಯ

ಯುವಜನರ ಸಾಮಾಜಿಕ ಜೀವನದಲ್ಲಿ ಅವರ ಗೆಳೆಯರ ಗುಂಪಿನ ಪ್ರಭಾವ ಪ್ರಮುಖ ಪಾತ್ರವಹಿಸುತ್ತದೆ ಎಂಬ ಜನಪ್ರಿಯ ನಂಬಿಕೆಯ ಆಧಾರದ ಮೇಲೆ ಮೂರು ವಿವಿಧ ದೃಷ್ಟಿಕೋನಗಳಲ್ಲಿ ಕರ್ನಾಟಕದ ಯುವ ಸಮುದಾಯದ ಮೇಲೆ ಈ ಅಧ್ಯಯನ ಮಾಡಲಾಯಿತು. ತಮಗಿರುವ ಅತಿ ಹತ್ತಿರದ ಸ್ನೇಹಿತರ ಪಟ್ಟಿಯಲ್ಲಿ ಪ್ರತಿ ಐವರಲ್ಲಿ ಇತರ ಜಾತಿ, ಲಿಂಗ, ಮತ್ತು ಧರ್ಮದವರು ಎಷ್ಟು ಜನ ಇದ್ದಾರೆ ಎಂಬ ಬಗ್ಗೆ ಸಮೀಕ್ಷೆಯಲ್ಲಿ ಪ್ರಶ್ನಿಸಲಾಯಿತು. ಈ ಪ್ರಶ್ನೆಯ ಮೂಲಕ ಅವರು ತಮ್ಮ ಸಾಂಪ್ರದಾಯಿಕ ವೃತ್ತದ ಪರಿಧಿಯನ್ನು ದಾಟಿದ್ದಾರೆಯೇ ಅಥವಾ ಅದರೊಳಗೇ ನೆಮ್ಮದಿಯಾಗಿ ಇದ್ದಾರೆಯೇ ಎಂಬ ಸಮೀಕ್ಷೆಯ ಪ್ರತಿಕ್ರಿಯೆಗಳ ಆಧಾರದ ಮೇಲೆ ಸಾಮಾಜಿಕ ಪ್ರಭಾವದ ಒಂದು ವಿಷಯ ಸೂಚಿಯನ್ನು ಸಿದ್ಧಪಡಿಸಲಾಯಿತು. ಹಾಗೆ ಪಡೆದ ಪ್ರತಿಕ್ರಿಯೆಗಳನ್ನು ಯಾವುದೇ ಪ್ರಭಾವ ಇಲ್ಲ, ಮಧ್ಯಮ ಪ್ರಭಾವ, ಮತ್ತು ಹೆಚ್ಚಿನ ಪ್ರಭಾವ ಎಂಬ ಮೂರು ವಿಭಾಗಗಳನ್ನಾಗಿ ವಿಂಗಡಣೆ ಮಾಡಲಾಯಿತು.






n - 8490

ಸಮೀಕ್ಷಿಸಿದ ಯುವಜನತೆಯ ಪ್ರತಿ ನಾಲ್ಕುಜನರ ಅತಿ ಹತ್ತಿರದ ಸ್ನೇಹಿತರಲ್ಲಿ ಮೂವರು ಬೇರೆ ಜಾತಿ, ಲಿಂಗ, ಮತ್ತು ಬೇರೆ ಧರ್ಮಕ್ಕೆ ಸೇರಿದವರು ಎನ್ನುವುದು ಕಂಡುಬಂತು.

ಯುವತಿಯರಿಗೆ ಹೋಲಿದರೆ, ಯುವಕರಲ್ಲಿ ಈ ಮೂರು ವರ್ಗದ ಸ್ನೇಹಿತರ ಬಗೆಗೂ ಹೆಚ್ಚಿನ ಒಲವು ತೋರುವುದು ಸಾಧ್ಯವಾಗಿದೆ. ವಿಧ್ಯಾಭಾಸದ ಅನುಕೂಲ ಹೆಚ್ಚಾದಷ್ಟೂ, ಬೇರೆ ಜಾತಿ, ಅಥವಾ ಲಿಂಗದ ಮತ್ತು ಅವರ ಧರ್ಮಕ್ಕೇ ಸೇರಿದ ಸ್ನೇಹಿತರನ್ನು ಮಾಡಿಕೊಳ್ಳುವ ಸಾಧ್ಯತೆ ಇರುತ್ತದೆ. ಮೇಲ್ವರ್ಗ ಮತ್ತು ಕೆಳವರ್ಗದವರಿಗಿಂತ ಮಧ್ಯಮ ವರ್ಗದಿಂದ ಬಂದವರಿಗೆ ಈ ಮೂರೂ ವರ್ಗದ ಸ್ನೇಹಿತರೊಂದಿಗೆ ಹೆಚ್ಚಿನ ಒಡನಾಟ ಹೊಂದಿರುವುದು ಸಾಧ್ಯವಾಗಿದೆ.




n - 8490

ಈ ಯುವಜನಾಂಗ ವಾಸ ಮಾಡುವ ಪ್ರದೇಶ ಕೂಡ ಅವರು ಹೊಂದಿರುವ ಸ್ನೇಹಿತರ ಆತ್ಮೀಯ ವಲಯದ ಮೇಲೆ ಪ್ರಭಾವ ಬೀರಿದೆ. ಬೆಂಗಳೂರಿಗರಿಗೆ ಹೋಲಿಸಿದರೆ ಸಣ್ಣ ಪಟ್ಟಣಗಳಿಂದ ಬಂದವರು ಈ ವರ್ಗದ ಹೆಚ್ಚಿನ ಸ್ನೇಹಿತರನ್ನು ಹೊಂದಿರುತ್ತಾರೆ. ಬೆಂಗಳೂರಿನ ಪ್ರತಿ ಮೂವರಲ್ಲಿ ಒಬ್ಬರು ಈ ವರ್ಗದವರಲ್ಲಿ ಯಾವುದೇ ಹತ್ತಿರದ ಸ್ನೇಹಿತರನ್ನು ಹೊಂದಿಲ್ಲ ಎಂಬುದು ಕಂಡು ಬಂದಿದೆ.



## ಸ್ನೇಹಿತರ ವಲಯ

ಶ್ರೀ ಅಶೋಕ್, (ಹೆಸರು ಬದಲಿಸಲಾಗಿದೆ) ಇಪ್ಪತ್ತು ವರ್ಷ, ಇಂಡಸ್ಟ್ರಿಯಲ್ ಇಂಜಿನಿಯರಿಂಗ್‌ನಲ್ಲಿ ಡಿಪ್ಲೋಮಾ ವಿದ್ಯಾರ್ಥಿ.

ಕುಟುಂಬದ ನಾಲ್ಕು ಜನರಲ್ಲಿ ಕಿರಿಯವನೇ ಅಶೋಕ. ಅವನ ತಂದೆ ದಿನಗೂಲಿ ನೌಕರ, ತಾಯಿ ಗೃಹಿಣಿಯಾಗಿದ್ದಾರೆ. ತಂದೆ–ತಾಯಂದಿರು ಅನಕ್ಷರಸ್ಥರು. ಈ ಕಾರಣಕ್ಕಾಗಿ ( ಅವನ ದೃಷ್ಟಿಯಲ್ಲಿ) ಬ್ಯಾಂಕೊಂದರಲ್ಲಿ ಸಾಲ ತೆಗೆದುಕೊಳ್ಳಲು ಹೋದಾಗ ತಂದೆತಾಯಂದಿರ ಸಹಿ ಬೇಕಾದಾಗ ಮಾತ್ರ ಅವರು ಅನಕ್ಷರಸ್ಥರಾಗಿದ್ದು ಅವನಿಗೆ ಅನಾನುಕೂಲಕರವಾಗಿ ಕಂಡು ಬಂತು. ವಿದ್ಯಾಭ್ಯಾಸದಲ್ಲಿ ಅವನಿಗೆ ಆಸಕ್ತಿಯಿಲ್ಲ. ಪಿಯುಸಿಯ ನಂತರ ಕೈಗಾರಿಕಾ ತರಬೇತಿ ಕೇಂದ್ರವೊಂದರಲ್ಲಿ ಸೀಟು ಪಡೆದುಕೊಳ್ಳಲು ಸಾಧ್ಯವಾಯಿತು. ಅವನಿಗೆ ಸೂಕ್ತವಲ್ಲದ ಕೆಲಸದಲ್ಲಿ ಹಣ ಗಳಿಸುವುದು ಅವನಿಗೆ ಸಾಧ್ಯವಾಗಿದೆ. ಅವನು ಆಗ್ಗಾಗ್ಗೆ ಮಾಡುವ ಸುಲಭ ಕೆಲಸಗಳಲ್ಲಿ, ಅಪಾರ್ಟ್‌ಮೆಂಟ್‌ಗಳಲ್ಲಿ ಕಾರನ್ನು ತೊಳೆಯುವುದು ಒಂದು. ಈ ರೀತಿಯಲ್ಲಿ ಹಣ ಗಳಿಸುವುದರ ಮೂಲಕ ಅವನಿಗೆ ಮೊಬೈಲ್ ಫೋನ್ ಖರೀದಿಸುವುದು, ಫೋನಿಗೆ ಕರೆನ್ಸಿ ಹಾಕಿಸುವುದು, ಆಧುನಿಕ ಶೈಲಿಯ ಉಡುಪುಗಳನ್ನು ಧರಿಸುವುದು ಗೆಳೆಯರೊಂದಿಗೆ ವಿಹಾರಕ್ಕೆ ಹೊರಹೋಗುವುದು ಸಾಧ್ಯವಾಗಿದೆ. ಅವನ ತಂದೆತಾಯಂದಿರು ಅವನ ಆಧುನಿಕ ಶೈಲಿಯ ಬಗ್ಗೆ ತಲೆಕೆಡಿಸಿಕೊಳ್ಳದಿದ್ದರೂ, ಕೆಲವು ವಿಚಾರಗಳನ್ನು ಮಾತ್ರ ಅವರು ಒಪ್ಪುವುದಿಲ್ಲ. ಅದರ ಬದಲಾಗಿ ಅವರು ಅವನ ದೀರ್ಘಕಾಲದ ಉಳಿತಾಯದ ಬಗ್ಗೆ ಪ್ರಶಂಸೆ ಮಾಡಬಹುದಾಗಿತ್ತು ಎಂದು ಅಭಿಪ್ರಾಯ ಪಡುತ್ತಾನೆ. ಅವನು ಹೆಸರಿಸಿದವರಲ್ಲಿ ಮೂರು ಹುಡುಗರು ಮಾತ್ರ ಅವನದೇ ವಯಸ್ಸು, ಮತ್ತು ಹಿನ್ನೆಲೆಯವರಾಗಿದ್ದು, ಉಳಿದವರು ಕೆಲಸದ ಮತ್ತು ಸಾಮಾಜಿಕ ಸಂಪರ್ಕದ ಕಾರಣವಾಗಿ ಮಾತ್ರ ಏರ್ಪಡಿಸಿಕೊಂಡ ಸಂಬಂಧಗಳಾಗಿವೆ.

ಅವನ ಹತ್ತಿರದ ಎಲ್ಲಾ ಸ್ನೇಹಿತರು ಅವನದೇ ಹಿನ್ನೆಲೆಯಿಂದ ಬಂದವರಾಗಿದ್ದಾರೆ, ಹಾಗಾಗಿ ಅವರು ಪರಸ್ಪರರ ಸನ್ನಿವೇಶ ಮತ್ತು ಆಕಾಂಕ್ಷೆಗಳನ್ನು ಅರ್ಥಮಾಡಿಕೊಳ್ಳಬಲ್ಲವರಾಗಿದ್ದಾರೆ. ಹಾಗಾಗಿ ಅವನು ಅವರೆಲ್ಲ ತನಗೆ ಅನುಕೂಲಕರವಾದವರು ಮತ್ತು ಪರಸ್ಪರ ಬೆಂಬಲವಾಗಿ ನಿಲ್ಲುವವರು ಎಂದು ಭಾವಿಸಿದ್ದಾನೆ, ಅವನ ಸಾಮಾಜಿಕ ವಲಯದಲ್ಲಿ ಮತ್ತು ಕಾಲೇಜಿನಲ್ಲಿ ಸಹಜವಾಗಿ ಅವನೇ ನಾಯಕನಾಗಿರಲು ಸಾಧ್ಯವಾಗಿದೆ ಎಂದು ಹೇಳಿಕೊಳ್ಳುತ್ತಾನೆ. ಸ್ನೇಹಿತರ ಗುಂಪಿನಲ್ಲಿ ಮನರಂಜನೆಗಾಗಿ ಹೋಗುವ ಜಾಗ ಮತ್ತು ಸ್ಥಳಗಳ ಬಗ್ಗೆ ನಿರ್ಧಾರ ಕೈಗೊಳ್ಳುವವನು ಅವನೇ ಆಗಿದ್ದಾನೆ.

(ಇದು "ನನ್ನ ಸ್ನೇಹಿತರ ವಲಯ" ಎಂಬ ವಿಷಯವಾಗಿ ಸಿಇಆರ್‌ಎಸ್‌ಎಸ್‌ಇ ನಡೆಸಿದ ವ್ಯಕ್ತಿಗತ ಸಮೀಕ್ಷೆಯ ವರದಿಯಾಗಿದೆ)




| | ಪ್ರತಿ ಲಿಂಗ | ಇತರೇ ಜಾತಿಯವರು | ಇತರೇ ಧರ್ಮದವರು |
|---|---|---|---|
| ಹೆಚ್ಚು ಸಂವಹನ | 25 | 18 | 7 |
| ಸಾಧಾರಣ ಸಂವಹನ | 60 | 70 | 69 |
| ಸಂವಹನ ಇಲ್ಲ | 15 | 12 | 24 |

n - 8490

ಯುವಜನರ ಈ ರೀತಿಯ ಸಾಮಾಜಿಕ ಒಡನಾಟ ಮತ್ತು ಆಪ್ತವಲಯವು ಇಪ್ಪತ್ತನೇ ಶತಮಾನದ ಮೊದಲ ಭಾಗದಲ್ಲಿ ಕರ್ನಾಟಕ ರಾಜ್ಯದಲ್ಲಿ ಕಂಡ ಸಾಮಾಜಿಕ ಪರಿವರ್ತನೆ ಹಾಗೂ ವಾಸ್ತವತೆಯ ಸೂಚಕವಾಗಿದೆ ಮತ್ತು ಯುವಕ, ಯುವತಿಯರ ನಡುವಿನ ಸಾಮಾಜಿಕ ಅಡಚಣೆಗಳನ್ನು ಮುರಿಯುವುದರ ಸ್ಪಷ್ಟ ಸೂಚನೆಯಾಗಿದೆ ಎಂದು ಹೇಳಬಹುದು.

## ಯುವ ಜನರು ಸಾಮಾಜಿಕ ಅಸಮಾನತೆಯನ್ನು ಎದುರಿಸುತ್ತಿದ್ದಾರೆಯೇ?

ಈ ರಾಜ್ಯದ ಯುವಜನತೆ ಪರಸ್ಪರ ತಾರತಮ್ಯವನ್ನು ಅನುಭವಿಸುತ್ತಿದ್ದಾರೆಯೇ? ಒಂದು ವೇಳೆ ಈ ಸಾಮಾಜಿಕ ಅಸಮಾನತೆ ಇರುವುದೇ ಆಗಿದ್ದಲ್ಲಿ, ತಾರತಮ್ಯದ ಆಳ ಮತ್ತು

ಸ್ವರೂಪವನ್ನು ತಿಳಿದುಕೊಳ್ಳಲು ಲಿಂಗ, ಆರ್ಥಿಕ ಸ್ಥಿತಿ, ಜಾತಿ, ಧರ್ಮ ಮತ್ತು ವಾಸಿಸುವ ಪ್ರದೇಶ ಆಧಾರದ ಮೇಲೆ ಯುವಜನರು ಈ ತಾರತಮ್ಯವನ್ನು ಅನುಭವಿಸಿದ್ದಾರೆಯೇ ಎಂಬ ಬಗ್ಗೆ ನಿರ್ದಿಷ್ಟ ಪ್ರಶ್ನೆಗಳನ್ನು ಕೇಳಲಾಯಿತು. ತಾರತಮ್ಯದ ಸ್ವರೂಪದ ಬಗ್ಗೆ ಅವರ ಪ್ರತಿಕ್ರಿಯೆಯನ್ನು ತಿಳಿಯಲು, ಒಮ್ಮೊಮ್ಮೆ, ಕೆಲವೊಮ್ಮೆ ಮತ್ತು ಇಲ್ಲವೇ ಇಲ್ಲ ಎಂಬ ಮೂರು ಆಯ್ಕೆಗಳನ್ನು ಕೊಡಲಾಯಿತು.

ಯುವಜನರ ಪ್ರತಿಕ್ರಿಯೆಯನ್ನು ಆಧರಿಸಿ ಐದು ವಿವಿಧ ರೀತಿಯ ತಾರತಮ್ಯದ ಅಭಿಪ್ರಾಯ ಸೂಚಿಯನ್ನು ತಯಾರಿಸಲಾಯಿತು. ಈ ರೀತಿ ಪಡೆದ ಪ್ರತಿಕ್ರಿಯೆಗಳನ್ನು ಹೆಚ್ಚಿನ ತಾರತಮ್ಯ, ಕಡಿಮೆ ತಾರತಮ್ಯ ಮತ್ತು ತಾರತಮ್ಯ ರಹಿತ ಎಂಬ ಮೂರು ವಿಭಾಗಗಳಾಗಿ ವರ್ಗೀಕರಿಸಲಾಯಿತು.




n - 8117

ಪ್ರತಿ ನಾಲ್ಕರಲ್ಲಿ ಒಬ್ಬರು ಐದೂ ಸ್ತರಗಳಲ್ಲೂ ಯಾವುದೇ ತಾರತಮ್ಯಕ್ಕೆ ಒಳಗಾಗಿಲ್ಲ ಎಂದು ತಿಳಿಸಿದ್ದಾರೆ. ಶೇಕಡಾ ಐವತ್ತರಷ್ಟು ಜನ ತಾವು ತಾರತಮ್ಯವನ್ನು ಆಗಾಗ್ಗೆ ಅನುಭವಿಸಿದ್ದಾಗಿ ಹೇಳಿದ್ದಾರೆ.

## ಅಸಮಾನತೆಯನ್ನು ವಿರೋಧಿಸಿ....

ಶ್ರೀಮತಿ ಚಿತ್ರಾ (ಹೆಸರು ಬದಲಾಯಿಸಿದೆ) ವಯಸ್ಸು ಇಪ್ಪತ್ತು. ಗೃಹಿಣಿ .

ಚಿತ್ರಾ ಹೇಳುವಂತೆ ಆಕೆ ತನ್ನ ತಾಯಿಯ ಕೊನೆಯ ತಮ್ಮನನ್ನೇ ಮದುವೆಯಾಗಿದ್ದಾಳೆ. ಆಕೆಯ ಪತಿ ಆಕೆಗಿಂತಲೂ ಹತ್ತು ವರ್ಷ ದೊಡ್ಡವರು. ಆಕೆಯ ಎಸ್.ಎಸ್.ಎಲ್.ಸಿ ವಿದ್ಯಾಭ್ಯಾಸ ಮುಗಿದ ನಂತರ ವಿದ್ಯಾಭ್ಯಾಸ ಮುಂದುವರಿಸಲು ತುಂಬಾ ಆಸಕ್ತಿಯಿದ್ದರೂ ಮದುವೆಯಾಗಲೇಬೇಕಾದ ಒತ್ತಡ ಎದುರಾಗಿತ್ತು. ಆಕೆಗೆ ಬೆಂಬಲ ಕೊಡಬೇಕಾದ ಪಾಲಕರೇ ಅವಳ ವಿದ್ಯಾಭ್ಯಾಸಕ್ಕೆ ಅಡ್ಡಿಯಾಗಿದ್ದರು. ಆಕೆಯು ಅವರ ಒಬ್ಬಳೇ ಮಗಳಾಗಿದ್ದಿದ್ದರಿಂದ ಈ ಸಂಬಂಧದಿಂದ ಅನುಕೂಲವೇ ಆಗುತ್ತದೆ ಎಂದು ಅವರು ತಿಳಿದಿದ್ದರು. ಆಕೆ ಹೇಳುವಂತೆ, ಆ ಮದುವೆಯನ್ನು ನಿರಾಕರಿಸಲು ಎರಡು ಮುಖ್ಯ ಕಾರಣಗಳೆಂದರೆ, ಒಂದು, ತಾನು ಶಿಕ್ಷಕಿಯಾಗಬೇಕೆಂಬ ಆಸೆಯನ್ನು ಬಾಲ್ಯದಿಂದಲೇ ಪೋಷಿಸಿಕೊಂಡುಬಂದಿದ್ದಳಾದ್ದರಿಂದ ಆಕೆಯು ತನ್ನ ಓದನ್ನು ಮುಂದುವರಿಸಬೇಕಾಗಿತ್ತು. ಎರಡು, ತನಗೆ ವಿದ್ಯಾವಂತನಾದ ಗಂಡನೇ ಬೇಕೆಂದು ಆಕೆ ಬಯಸಿದ್ದಳು. ಆಕೆ ಹೇಳುವಂತೆ, (ಈ ಅನಿಸಿಕೆ ಈಡೇರಿಯತನಕವೂ ಹಾಗೆ ಇರುತ್ತದೆ) ತನ್ನ ಇಚ್ಛೆಗೆ ವಿರುದ್ಧವಾಗಿ ಈ ವಿವಾಹಕ್ಕೆ ತನ್ನ ಮನೆಯವರು ಒತ್ತಾಯ ಮಾಡಿದ್ದು ತೀವ್ರ ನಿರಾಸೆಯನ್ನುಂಟು ಮಾಡಿದೆ. ಆಕೆ ಹೇಳುವಂತೆ, ತನ್ನ ಕುಟುಂಬದ ತೀವ್ರ ವಿರೋಧದ ನಡುವೆಯೂ, ತಾನು ಗಟ್ಟಿಯಾಗಿ, ಮತ್ತು ಹಠ ಬಿಡದೆ ಒಂದು ವಾರ ಕಾಲ ಉಪವಾಸ ಕುಳಿತು ಅದನ್ನು ವಿರೋಧಿಸಿದ್ದಾಗಿ ಹೇಳುತ್ತಾಳೆ. ಆದರೆ, ಕುಟುಂಬದ ಒಬ್ಬೇ ಒಬ್ಬ ಸದಸ್ಯನೂ ಅಥವಾ ಬಂಧುಗಳು ಆಕೆಯ ಬೆಂಬಲಕ್ಕೆ ನಿಲ್ಲದೆ ಅವಳಿಗೆ 'ಸ್ವಾರ್ಥಿ' ಎಂಬ ಹಣೆಪಟ್ಟಿ ಹಚ್ಚಿದ್ದರು. ಅಲ್ಲದೆ, ಶಿಕ್ಷಣವೇ ಈ ಹುಡುಗಿಯನ್ನು ಈ ರೀತಿ ಮಾಡಿದೆ ಎನ್ನುವಂತೆ ಮಾತನಾಡಿಕೊಂಡರು. ಆದರೆ ಆಕೆಯ ನಿರ್ಧಾರ ಆಕೆಯ ಪಾಲಕರನ್ನು, ಮತ್ತು ಕುಟುಂಬದ ಸದಸ್ಯರನ್ನು ಘಾಸಿಗೊಳಿಸಿದ ಕಾರಣಕ್ಕಾಗಿ ಅದನ್ನು ಬದಲಾಯಿಸಬೇಕಾಯಿತು.

ಪ್ರಾರಂಭದಲ್ಲಿ ತನ್ನ ಗಂಡ ಒರಟನಂತೆ ಕಂಡರೂ, ಇತರ ಗಂಡಸರಂತೆ ಕುಡಿದು ಮನೆಗೆ ಬರದಿರುವುದು, ಇತರ ಹಳ್ಳಿಗರ ಜೊತೆ ಇಸ್ಪೀಟ್ ಆಡುತ್ತಾ ಕೂರದೆ ಇರುವುದು, ಅಥವಾ ಯಾವುದಕ್ಕೆ ಆಗಲಿ ಅವಳನ್ನು ಒತ್ತಾಯಿಸದೆ ಇರುವ ಆತನ ಅಂತರಿಕ ಒಳ್ಳೆಯತನವನ್ನು ಗುರುತಿಸತೊಡಗಿದಳು. ಮಣ್ಣಿನ ಮನೆಯನ್ನು ಕಾಂಕ್ರೀಟ್ ಮನೆಯನ್ನಾಗಿ ಬದಲಾಯಿಸಲು, ಬಾಡಿಗೆ ಕೊಡಲು ಮನೆಗೆ ಕೆಲವು ಹೆಚ್ಚುವರಿ ಕೋಣೆಗಳನ್ನು ಕಟ್ಟಿಸಲು ಮತ್ತು ನಿಶ್ಚಿತ ಆದಾಯ ಬರುತ್ತದೆ ಎಂಬ ಕಾರಣಕ್ಕಾಗಿ ತಾನು ಮನೆಯ ಆರ್ಥಿಕ ಜವಾಬ್ದಾರಿಯನ್ನು ತೆಗೆದುಕೊಳ್ಳಲು ಆಕೆ ಪ್ರಾರಂಭಿಸಿದಳು. ಆಕೆಯ ವಿದ್ಯಾಭ್ಯಾಸದಿಂದಾಗಿ ಅವಳು ಸರಿಯಾದ ನಿರ್ಧಾರಗಳನ್ನು ತೆಗೆದುಕೊಂಡಿದ್ದಾಳೆ ಎಂಬುದು ಗಂಡನಿಗೆ ತಿಳಿಯಲು ಇದು ಸಹಾಯಕವಾಯಿತು. ಆದರೂ ಆಕೆಯ ಗಂಡ ಕೆಲವು ನಿರ್ಧಾರಗಳನ್ನು ಒಪ್ಪುವುದಿಲ್ಲ. ಆಕೆ ಹೇಳುವಂತೆ, ವ್ಯವಸಾಯವು ಋತುಮಾನಕ್ಕೆ ಸಂಬಂಧಪಟ್ಟ ಕೆಲಸವಾದ್ದರಿಂದ, ಉಳಿದ ದಿನಗಳಲ್ಲಿ ಆಕೆ ಯಾವುದೇ ಕೆಲಸವಿಲ್ಲದೆ ಖಾಲಿ ಕುಳಿತುಕೊಳ್ಳಬೇಕಾಗುತ್ತಿತ್ತು. ಹಾಗಾಗಿ, ತಾನು ಗಾರ್ಮೆಂಟ್ ಫ್ಯಾಕ್ಟರಿಯಲ್ಲಿ ಅಥವಾ ಹತ್ತಿರದ ಕೋಲಾ ಉತ್ಪನ್ನ ಕಂಪೆನಿಗೆ ಪರ್ಯಾಯ ಆದಾಯಕ್ಕಾಗಿ ಕೆಲಸಕ್ಕಾಗಿ ಹೋಗಬಹುದು ಎಂದು ಬಯಸಿದ್ದಳು. ಆದರೆ, ಆಕೆ ಕೆಲಸಕ್ಕೆ ಹೋಗುವ ಕಡೆಗಳಲ್ಲಿ ಬೇರೆಯ ಗಂಡಸರಿರುತ್ತಾರೆ ಎಂಬ ಕಾರಣಕ್ಕಾಗಿ ಅಂಥ ಕಡೆ ಕೆಲಸಕ್ಕೆ ಹೋಗಬಾರದೆಂದು ಆಕೆಯ ಗಂಡ ನಿರಾಕರಿಸುತ್ತಾರೆ. ಅನಕ್ಷರತೆ ಮತ್ತು ಹೊರಗಿನ ಸಂಪರ್ಕದ ಕೊರತೆ ತನ್ನ ಗಂಡನ ಸಂಕುಚಿತ ಮನೋಭಾವನೆಗೆ ಕಾರಣವಾಗಿದೆ ಎನ್ನುವುದು ಚಿತ್ರಾಳ ಅಳಲು.

(ಇದು 'ಒಬ್ಬ ಮಹಿಳೆಯಾಗಿ...' ಎಂಬ ವಿಷಯವಾಗಿ ಸಿಇಆರ್‌ಎಸ್‌ಎಸ್‌ಇ ನಡೆಸಿದ ವ್ಯಕ್ತಿಗತ ಸಮೀಕ್ಷೆಯ ವರದಿಯಾಗಿದೆ)

ಹಳ್ಳಿಗಳಿಗೆ ಹೋಲಿಸಿದರೆ ಪಟ್ಟಣ ಪ್ರದೇಶಗಳಲ್ಲಿ ವಾಸಿಸುವ ಯುವಜನರು ಈ ತಾರತಮ್ಯಕ್ಕೆ ಒಳಗಾಗುವುದು ಕಮ್ಮಿ ಎನ್ನುವುದು ಸ್ಪಷ್ಟವಾಗಿದೆ. ಗ್ರಾಮಾಂತರ ಪ್ರದೇಶದ ಯುವಜನರಿಗಿಂತ, ಪಟ್ಟಣದ ಯುವತಿಯರು ಈ ತಾರತಮ್ಯಕ್ಕೆ ಒಳಗಾಗುವುದು ಕಡಿಮೆ ಈ ಚರ್ಚೆಯಲ್ಲಿ ಎರಡು ಮುಖ್ಯ ವಿಚಾರಗಳನ್ನು ಗಮನಿಸಬಹುದಾಗಿದೆ. ಮೊದಲನೆಯದಾಗಿ, ಇದು ಒಂದು ಗ್ರಹಿಕೆಯ ಪ್ರಶ್ನೆ. ಹೊರಗಿನ ಮುಕ್ತಸಂಪರ್ಕದ ಕಾರಣವಾಗಿ ಪಟ್ಟಣ ಪ್ರದೇಶದ ಯುವಜನರು ಬೇರೆ ಬೇರೆ ರೀತಿಯ ತಾರತಮ್ಯವನ್ನು ಒಪ್ಪದಿರುವುದು ಒಂದು ಕಾರಣವಾಗಿರಬಹುದು. ಎರಡನೆಯದಾಗಿ, ಪಟ್ಟಣದಲ್ಲಿ ವಾಸಿಸುವ ಯುವಜನರಲ್ಲಿ ತಮ್ಮ ಹಕ್ಕುಗಳು ಮತ್ತು ಸಮಾನತೆಯ ಅರಿವು ಹೆಚ್ಚಾಗಿರುವುದರಿಂದ ಈ ರೀತಿಯ ತಾರತಮ್ಯಗಳನ್ನು ಒಪ್ಪದಿರುವುದು ಕಂಡುಬರುತ್ತದೆ.

ಅಸಮಾನತೆಯ ಎಲ್ಲಾ ವಿವರಗಳ ವಿಷಯ ಸೂಚಿಯನ್ನು ವಿವಿಧ ಮಾನದಂಡಗಳಿಂದ ಗಮನಿಸಿ ನೋಡಿದಾಗ, ಎರಡು ಮುಖ್ಯ ಆಯಾಮಗಳಲ್ಲಿ ಈ ತಾರತಮ್ಯ ಕಂಡುಬರುತ್ತದೆ– ಸಾಮಾಜಿಕ–ಆರ್ಥಿಕ ನೆಲೆಯಲ್ಲಿ ಮತ್ತು ಜಾತಿಯ ನೆಲೆಯಲ್ಲಿ. ಸಾಮಾಜಿಕ–ಆರ್ಥಿಕ ಸ್ಥಿತಿಗತಿಗಳು ಹೆಚ್ಚಿರುವ ಪ್ರತಿ ಹತ್ತು ಯುವಜನರಲ್ಲಿ ನಾಲ್ಕರಷ್ಟು ಮಂದಿ ತಮಗೆ ತಾರತಮ್ಯದ ಯಾವುದೇ ಅನುಭವವಾಗಿಲ್ಲ ಎಂದು ಹೇಳಿಕೊಂಡಿದ್ದಾರೆ. ಮಧ್ಯಮ ವರ್ಗದ ಪ್ರತಿ ನಾಲ್ವರಲ್ಲಿ ಒಬ್ಬರು ಮತ್ತು ಸಾಮಾಜಿಕ–ಆರ್ಥಿಕ ಮಟ್ಟ ಕಡಿಮೆ ಇರುವವರಲ್ಲಿ ಪ್ರತಿ ನಾಲ್ಕರಲ್ಲಿ ಒಬ್ಬರು ಹೆಚ್ಚಿನ ತಾರತಮ್ಯಕ್ಕೆ ಒಳಗಾಗಿದ್ದಾರೆ ಎನ್ನುವುದು ವರದಿಯಾಗಿದೆ. ಬಡವರ ವಿಷಯಕ್ಕೆ ಬಂದರೆ, ಸಿಕ್ಕ ಅವಕಾಶಗಳನ್ನು ಅವರು ಸರಿಯಾಗಿ ಬಳಸಿಕೊಳ್ಳಲು ಆಗದಿರುವುದರ ಫಲಿತಾಂಶ ಇಲ್ಲಿ ಎದ್ದು ಕಾಣುತ್ತದೆ. ಮಧ್ಯಮ ವರ್ಗದ ಯುವಜನರಲ್ಲಿ ಇದು ಹೆಚ್ಚುತ್ತಿರುವ ಆಶೋತ್ತರಗಳನ್ನು ಈಡೇರಿಸಿಕೊಳ್ಳಲು ಸಾಧ್ಯವಾಗದಿರುವುದರ ಕಾರಣಕ್ಕಾಗಿ ಆತರಬಹುದು. ಸಾಮಾಜಿಕ ಸಂಬಂಧಗಳು ಮತ್ತು ಕುಟುಂಬ ಹಾಗು ಸಾಮಾಜಿಕ ಸಂಪ್ರದಾಯಗಳ ಮೇಲೆ ಅವರು ಕೊಡುವ ಮಹತ್ವದ ಕಾರಣದಿಂದಾಗಿ ಕರ್ನಾಟಕದ ಯುವಜನರು ಪರಿವರ್ತನೆಯ ಸಂಕೇತವಾಗಿದ್ದಾರೆ. ಸಂಪ್ರದಾಯಗಳ ವಿಚಾರವಾಗಿ ಅವರಿಗಿರುವ ಬದ್ಧತೆ ಮತ್ತು ತಮ್ಮ ಪರಂಪರೆಯ ಉತ್ತಮ ಅಂಶಗಳನ್ನು ಉಳಿಸಿಕೊಳ್ಳುವ ನಂಬಿಕೆ, ಬದಲಾಗುವ ವಾಸ್ತವತೆಗೆ, ಹಾಗೂ ಬದಲಾಗುವ ಕಾಲದ ಅಗತ್ಯತೆಗಳಿಗೆ ಮಾಡಿಕೊಳ್ಳುವ ಹೊಂದಾಣಿಕೆಯಾಗಿದೆ.

**ಜವಾಬ್ದಾರಿಗಳನ್ನು ತೆಗೆದುಕೊಳ್ಳುವ ಬದ್ಧತೆ ಮತ್ತು ಗುಣಾತ್ಮಕ ದೃಷ್ಟಿಕೋನಗಳನ್ನು ಹೊಂದಿರುವ ವಿಚಾರದಲ್ಲಿ ಕರ್ನಾಟಕದ ಯುವಜನತೆ ಒಂದೇ ಮನಸ್ಸಿನವರಾಗಿದ್ದಾರೆ ಮತ್ತು ಏಕನಿಷ್ಠರಾಗಿದ್ದಾರೆ.**

ಯುವಜನರು ಸಮಾಜದ ಭವಿಷ್ಯತ್ತಿನ ಆಶಾವಾದದ ಪ್ರತಿನಿಧಿಗಳಾಗಿದ್ದಾರೆ. ಕರ್ನಾಟಕದ ಯುವಜನತೆಯ ಗುರಿ ಮತ್ತು ಆಕಾಂಕ್ಷೆಗಳೇನು? ಒಬ್ಬ ವ್ಯಕ್ತಿಯಾಗಿ ಅವರು ಏನನ್ನು ಸಾಧಿಸಲು ಇಷ್ಟಪಡುತ್ತಾರೆ? ಅವರ ಜೀವನದಲ್ಲಿ ಯಾವುದಕ್ಕೆ ಮಹತ್ವ ಕೊಡುತ್ತಾರೆ? ಅವರು ಎದುರಿಸುವ ಸವಾಲುಗಳೇನು ಮತ್ತು ಅವರು ಯಾವುದಕ್ಕೆ ಆತಂಕ ಪಡುತ್ತಾರೆ?

## ಯುವಜನತೆಯ ಪ್ರಾಶಸ್ತ್ಯಗಳ ಕಾರ್ಯಸೂಚಿ

ಯುವಜನರು ತಮ್ಮ ಜೀವನದಲ್ಲಿ ಯಾವುದಕ್ಕೆ ಮಹತ್ವ ಕೊಡುತ್ತಾರೆ ಎಂಬ ಸಮೀಕ್ಷೆಯನ್ನು ರಾಜ್ಯದಲ್ಲಿ ಕೈಗೊಳ್ಳಲಾಯಿತು. ಮೂಲಭೂತ ಪ್ರಾಶಸ್ತ್ಯಗಳಿಗೆ ಅವರು ಎಷ್ಟು ಮಹತ್ವ ಕೊಡುತ್ತಾರೆ ಎಂಬುದರ ಬಗ್ಗೆ ಪ್ರಶ್ನೆಗಳನ್ನು ಕೇಳಲಾಯಿತು.




| | ಉನ್ನತ ಶಿಕ್ಷಣ ಪಡೆಯುವುದು | ಮೂಲಭೂತ ಸವಲತ್ತು ಹೊಂದುವುದು | ಜವಾಬ್ದಾರಿ ತೆಗೆದುಕೊಳ್ಳುವುದು | ಸಮಾಜಕ್ಕೆ ಕೊಡುಗೆ ನೀಡುವುದು |
|---|---|---|---|---|
| ಬಹಳ ಪ್ರಾಮುಖ್ಯ | 81 | 68 | 58 | 57 |
| ಪ್ರಾಮುಖ್ಯ | 14 | 27 | 29 | 32 |
| ಅಷ್ಟೊಂದು ಪ್ರಾಮುಖ್ಯವಲ್ಲ | 4 | 4 | 10 | 10 |
| ಪ್ರಾಮುಖ್ಯತೆ ಇಲ್ಲ | 1 | 1 | 3 | 1 |

n 8862

ಪ್ರತಿ ಹತ್ತರಲ್ಲಿ ಎಂಟು ಜನ ಉನ್ನತ ಶಿಕ್ಷಣ ಬಹಳ ಮುಖ್ಯ ಎಂದು ಭಾವಿಸಿದ್ದಾರೆ. ಹಾಗೆ ಹೇಳಿದವರನ್ನೂ ಸೇರಿಸಿಕೊಂಡು ಶೇಕಡಾ ಐದು ಜನರನ್ನು ಹೊರತು ಪಡಿಸಿ ಉಳಿದವರು ಈ ನಿಲುವನ್ನೇ ಸಮರ್ಥಿಸಿಕೊಂಡಿದ್ದಾರೆ.

**ನನ್ನ ಮಗುವಿನ ಜೊತೆ ನಾನೂ ಬೆಳೆಯುತ್ತೇನೆ.**

ಕಮಲಮ್ಮನ ಕಥೆ (ಹೆಸರು ಬದಲಿಸಲಾಗಿದೆ) ವಯಸ್ಸು 25. ಅವಳು ತನ್ನ ಕತೆಯನ್ನು ಮಗಳ ಶಾಲೆಯ ಶಿಕ್ಷಕಿಯೊಂದಿಗೆ ಹಂಚಿಕೊಂಡಿದ್ದಾಳೆ.

ನನ್ನ ಜೀವನದಲ್ಲಿ ಶಾಲೆಗೆ ಹೋಗುವ ಅವಕಾಶ ಯಾವತ್ತೂ ಬರಲೇ ಇಲ್ಲ. ನನ್ನ ಬುಡಕಟ್ಟು ಕುಟುಂಬದ ತಾರುಣ್ಯದ ದಿನಗಳಲ್ಲಿ ಯಾರೂ ಶಾಲೆಗೆ ಹೋಗಲಿಲ್ಲ. ನನ್ನ ಮಗಳಿಗೆ ಆರು ವರ್ಷವಾಗಿ ಮಗಳನ್ನು ಶಾಲೆಗೆ ಸೇರಿಸುವಂತಾದಾಗ ಮಾತ್ರ ಮೊದಲ ಬಾರಿ ಶಾಲೆಗೆ ಹೋದೆ. ನಾನು ನನ್ನ ಗಂಡ ನಮ್ಮ ಮಗಳನ್ನು ಶಾಲೆಗೆ ಸೇರಿಸುವುದಕ್ಕಾಗಿ ಸಾಕಷ್ಟು ಹಣವನ್ನು ಕೂಡಿಟ್ಟಿದ್ದೆವು. ನನ್ನ ಗಂಡನೂ ಕೂಡ ಶಾಲೆಯ ಮುಖವನ್ನೂ ನೋಡಿಲ್ಲ. ಮಗಳನ್ನು ಸ್ಕೂಲಿಗೆ ಸೇರಿಸಲು ಪ್ರಿನ್ಸಿಪಾಲರನ್ನು ಭೇಟಿ ಮಾಡಲು ಹೋಗಬೇಕಾಗಿ ಹೇಳಿದಾಗ ಆವನು ಹಿಂಜರಿದು ಆ ಕೆಲಸವನ್ನು ನಾನೇ ಮಾಡಲು ತಿಳಿಸಿದ. ನನಗೆ ಆತಂಕವಾದರೂ ಕೂಡ ನನ್ನ ಮಗಳು ಓದಬೇಕೆಂಬ ಕಾರಣಕ್ಕಾಗಿ ಹೋಗಲು ನಿರ್ಧಾರ ಮಾಡಬೇಕಾಯಿತು.

ನನ್ನ ಮಗಳು ಶಾಲೆಯಲ್ಲಿ ಶಿಕ್ಷರು ಮತ್ತು ಅವಳ ತರಗತಿಯ ಮಕ್ಕಳೊಂದಿಗೆ ಹೇಗೆ ಹೊಂದಿಕೊಳ್ಳುತ್ತಾಳೋ ಎಂಬ ಆತಂಕ ಉಂಟಾಗಿತ್ತು. ಶಾಲೆಯ ಮೊದಲ ದಿನ ಅವಳು ಚೆನ್ನಾಗಿಯೇ ಇದ್ದಳು. ನಾನು ಅವಳನ್ನು ಪ್ರತಿದಿನವೂ ಶಾಲೆಗೆ ಕರೆದುಕೊಂಡು ಹೋಗುತ್ತಿದ್ದೆ ಮತ್ತು ಶಾಲೆ ಮುಗಿಯುವವರೆಗೂ ಅಲ್ಲಿಯೇ ಇರುತ್ತಿದ್ದೆ. ಅವಳ ತರಗತಿಯ ಶಿಕ್ಷಕಿ ಮಗಳು ಆರಾಮಾಗಿ ಇರುತ್ತಾಳೆ, ನಾನು ಮನೆಗೆ ಹೋಗುವಂತೆ, ಹೇಳಿದರೂ ನಾನು ಅಲ್ಲಿಯೇ ಇರುತ್ತಿದ್ದೆ. ನಾನು ಅವರಿಗೆ ಯಾವುದೆ ರೀತಿಯ ತೊಂದರೆ ಕೊಡುವುದಿಲ್ಲವೆಂದು ಹೇಳಿದೆ. ನನ್ನ ಮಗಳು ಬೆಳೆಯುವುದನ್ನು ನೋಡಬೇಕಾಗಿತ್ತು, ಅವರು ಪಾಠ ಇತ್ಯಾದಿ ಮಾಡುವುದು ನನಗೆ ಸ್ವಲ್ಪವೂ ಅರ್ಥವಾಗುತ್ತಿರಲಿಲ್ಲ. ಆದರೆ ನನ್ನ ಮಗಳ ಬೆಳವಣಿಗೆಯಲ್ಲಿ ನಾನು ನನ್ನ ಬಾಲ್ಯವನ್ನು ಕಾಣುತ್ತಿದ್ದೆ. ಅವಳು ಶಾಲೆಗೆ ಹೋದರೆ ನಾನೇ ಶಾಲೆಗೆ ಶಾಲೆಗೆ ಹೋದಂತೆ ಅನಿಸುತ್ತಿತ್ತು. ಅವಳು ಪ್ರತಿದಿನ ಶಾಲೆಗೆ ಹೋಗಲು ತುದಿಗಾಲಲ್ಲಿ ನಿಂತಿರುತ್ತಾಳೆ. ನಾನೂ ಸಹಾ! ಅವಳಿಗೋಸ್ಕರ ಮತ್ತು ನನಗೋಸ್ಕರ.

ಇದು 'ನನ್ನ ಮಗುವಿನ ಜೊತೆ ನಾನೂ ಬೆಳೆಯುತ್ತೇನೆ...' ಎಂಬ ವಿಷಯವಾಗಿ ಸಿಇಆರ್‌ಎಸ್‌ಎಸ್‌ಇ ನಡೆಸಿದ ವ್ಯಕ್ತಿಗತ ಸಮೀಕ್ಷೆಯ ವರದಿಯಾಗಿದೆ).

ಸಾಮಾಜಿಕ ಜವಾಬ್ದಾರಿ ಇರಬೇಕು ಎಂಬ ಬಗ್ಗೆ ಕರ್ನಾಟಕದ ಯುವಜನತೆಯಲ್ಲಿ ಸ್ಪಷ್ಟವಾದ ಅಭಿಪ್ರಾಯ ಕಂಡು ಬಂತು. ಪ್ರತಿ ಹತ್ತು ಜನರಲ್ಲಿ ಆರು ಜನ ಸಮಾಜಕ್ಕೆ ಏನನ್ನಾದರು ಕೊಡುಗೆಯಾಗಿ ಕೊಡುವುದು ಅತ್ಯಂತ ಮುಖ್ಯ ಎಂದು ಹೇಳಿದ್ದಾರೆ. ಸಾಮಾಜಿಕ ಜವಾಬ್ದಾರಿಯನ್ನು ಯುವಜನತೆ ವಿವಿಧ ರೀತಿಯಲ್ಲಿ ಪರಿಭಾವಿಸಿದ್ದಾರೆ. ಸಾಮಾಜಿಕವಾಗಿ ಜವಾಬ್ದಾರಿಯುತವಾಗಿ ನಡೆದುಕೊಳ್ಳುವುದು ಎಂದು ಕೆಲವರು ಭಾವಿಸಿರಬಹುದು ಅಥವಾ ಇನ್ನು ಕೆಲವರು ಸಮಾಜಕ್ಕೆ ಉಪಯೋಗವಾಗುವ ಕೆಲಸದಲ್ಲಿ ತೊಡಗಿಕೊಂಡಿರುವುದು ಎಂದು ತಿಳಿಯಬಹುದು. ಈ ಸಮೀಕ್ಷೆಯಲ್ಲಿ ನೀವು ನಿಮ್ಮ ಬಿಡುವಿನ ಎಷ್ಟು ಸಮಯವನ್ನು ಸಾಮಾಜಿಕ ಕಾರ್ಯಗಳಲ್ಲಿ ತೊಡಗಲು ಬಳಸುತ್ತೀರಿ? ಎಂಬ ಇನ್ನೊಂದು ಪ್ರಶ್ನೆಯನ್ನು ಕೇಳಲಾಯಿತು. ಸಮೀಕ್ಷೆಗೆ ಒಳಪಟ್ಟ ಅರ್ಧದಷ್ಟು ಜನ ಆಗಾಗ್ಗೆ ಅಥವಾ ಕೆಲವೊಮ್ಮೆ ಮಾತ್ರ ತೊಡಗಿಕೊಳ್ಳುವುದಾಗಿ ಉತ್ತರ ಕೊಟ್ಟರು. ನಗರ ಪ್ರದೇಶಗಳಿಗೆ ಹೋಲಿಸಿದರೆ, ಗ್ರಾಮಾಂತರ ಪ್ರದೇಶಗಳ ಯುವಜನರು ಸಾಮಾಜಿಕ ಕಾರ್ಯಗಳಿಗಾಗಿ ಹೆಚ್ಚು ಸಮಯ ಕೊಡುತ್ತಾರೆ ಎನ್ನುವುದು ತಿಳಿದು ಬಂತು.

ಜೀವನದ ಬಗ್ಗೆ ಸಾಮಾನ್ಯ ಜನರು ತಾಳುವ ಅಭಿಪ್ರಾಯದ ಬಗ್ಗೆ ಯುವ ಜನರಿಗೆ ಹಲವಾರು ಪ್ರಶ್ನೆಗಳನ್ನು ಕೇಳಲಾಯಿತು. ಆ ಹೇಳಿಕೆಗಳ ಬಗ್ಗೆ ಅವರು ಕೊಟ್ಟ ಒಪ್ಪಿಗೆಯ ತೀವ್ರತೆಯ ಆಧಾರದ ಮೇಲೆ ಕೆಳಕಂಡ ಪ್ರತಿಕ್ರಿಯೆಯನ್ನು ದಾಖಲಿಸಲಾಗಿದೆ.






n - 8314

ಕರ್ನಾಟಕದ ಯುವಜನತೆಯ ಮುಂದೆ 'ತಾವು ಇತರರಿಗಿಂತ ಹೆಚ್ಚು ಸಾಧನೆ ಮಾಡುವುದು ಮುಖ್ಯವೇ' ಎಂಬ ಬಗ್ಗೆ ಪ್ರಶ್ನೆಯನ್ನು ಇಡಲಾಯಿತು. ಶೇಕಡಾ ಆರು ಜನರನ್ನು ಹೊರತುಪಡಿಸಿ, ಉಳಿದವರೆಲ್ಲ ಈ ಹೇಳಿಕೆಯನ್ನು ಒಪ್ಪಿದ್ದಾರೆ. ಹೊಸ ಜನಾಂಗದ ಸ್ಪರ್ಧಾತ್ಮಕ ಮನೋಭಾವವನ್ನು ಇಲ್ಲಿ ಸ್ಪಷ್ಟವಾಗಿ ತಿಳಿಯಬಹುದಾಗಿದೆ. ಪ್ರತಿಕ್ರಿಯಿಸಿದವರಲ್ಲಿ ಗ್ರಾಮಾಂತರ ಪ್ರದೇಶದವರಿಗಿಂತ, ಬೆಂಗಳೂರಿನ ಪ್ರತಿ ಹತ್ತರಲ್ಲಿ ಒಂಭತ್ತು ಜನ ಈ ಹೇಳಿಕೆಗೆ ದೃಢವಾದ ಒಪ್ಪಿಗೆಯನ್ನು ಕೊಟ್ಟಿದ್ದಾರೆ. ಹಳ್ಳಿಗಳಲ್ಲಿ ಪ್ರತಿ ನಾಲ್ಕರಲ್ಲಿ ಮೂರು ಜನ ಈ ಹೇಳಿಕೆಗೆ ಒಪ್ಪಿಗೆಯನ್ನು ಸೂಚಿಸಿದ್ದಾರೆ. ವಿದ್ಯಾಭ್ಯಾಸದ ಸೌಲಭ್ಯವು ಹೆಚ್ಚಿದಂತೆಲ್ಲಾ ಯುವ ಜನರು ಈ ಹೇಳಿಕೆಯನ್ನು ಬಲವಾಗಿ ಒಪ್ಪುವುದಕ್ಕೆ ಸಾಧ್ಯವಾಗಿರಬಹುದು. ಆಧುನಿಕ ಜಗತ್ತು ಒತ್ತಡಗಳಿಗೆ ಮತ್ತು ಸೆಳೆತಗಳಿಗೆ ಹೆಚ್ಚು ಮುಖಾಮುಖಿಯಾದದ್ದು, ಜಾಗತೀಕರಣ ಮತ್ತು ಉದಾರೀಕರಣ ಒದಗಿಸಿದ ಹೊಸ ಅವಕಾಶಗಳು ಮತ್ತು ಉನ್ನತ ವಿದ್ಯಾಭ್ಯಾಸಕ್ಕೆ ತೆರೆದುಕೊಂಡದ್ದು ಬಹುಶಃ ನಗರಗಳಲ್ಲಿ ಯುವಜನರ ಈ ಮನೋಭಾವಕ್ಕೆ ಕಾರಣವಾಗಿರಬಹುದು.






ಪ್ರತಿ ಹತ್ತರಲ್ಲಿ ಏಳು ಜನರು ಜೀವನದಲ್ಲಿ ಸಂತೋಷವಾಗಿರಲು ಹಣವೇ ಮುಖ್ಯ ಎಂಬ ಅಭಿಪ್ರಾಯ ಪಟ್ಟಿದ್ದಾರೆ. ಇದು ಯುವಜನರಲ್ಲಿನ ವ್ಯಾವಹಾರಿಕವಾದ ಸಹಜ ಪ್ರವೃತ್ತಿಯನ್ನು ತೋರಿಸುತ್ತದೆ. ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದ ಪ್ರಭಾವ ಯುವಜನರಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ.

ಇದನ್ನೇ ಹೋಲುವ ಇತರೆ ಪ್ರಶ್ನೆಗಳನ್ನು ಕೇಳಿದಾಗ, ಬಹುತೇಕರು ತಮ್ಮ ಜೀವನದ ಆಗುಹೋಗುಗಳ ಮೇಲೆ ತಮ್ಮ ನಿಯಂತ್ರಣವಿಲ್ಲ ಎಂಬುದನ್ನು ಒಪ್ಪಿಕೊಳ್ಳುತ್ತಾರೆ. ಪ್ರತಿ ಹತ್ತರಲ್ಲಿ ಆರು ಜನ ತಮ್ಮ ಜೀವನದ ನಿರ್ಣಯಗಳನ್ನು ಇತರರು ಕೈಗೊಳ್ಳುತ್ತಾರೆ ಎನ್ನುವುದನ್ನು ಧೃಡವಾಗಿ ಒಪ್ಪುತ್ತಾರೆ. ಈ ರೀತಿಯ ನಿರಾಸೆಯ ವಾತಾವರಣ ಬೆಂಗಳೂರಿಗರಲ್ಲಿ ಹೆಚ್ಚು. ಪಟ್ಟಣಗಳಲ್ಲಿ ಮತ್ತು ಸಣ್ಣ ನಗರಗಳಲ್ಲಿ ಈ ನಿರಾಸೆಯ ವಾತಾವರಣ ಸ್ವಲ್ಪ ಕಮ್ಮಿ. ಹಳ್ಳಿಗಳಲ್ಲಿ ಪ್ರತಿ ಮೂವರಲ್ಲಿ ಇಬ್ಬರು ಈ ಹೇಳಿಕೆಯನ್ನು ಒಪ್ಪುತ್ತಾರೆ. ಈ ಬಗ್ಗೆ ಹೆಚ್ಚಿನ ಒಪ್ಪಿಗೆ ಸೂಚಿಸುವವರು ಹಳ್ಳಿಗಳಲ್ಲಿ ಹೆಚ್ಚಾಗಿದ್ದರೆ, ಬೆಂಗಳೂರು ನಗರದಲ್ಲಿ 'ಒಪ್ಪುತ್ತೇನೆ' ಎನ್ನುವ ಅಭಿಪ್ರಾಯ ವ್ಯಕ್ತವಾಯಿತು.

ಯುವಜನರು ತಮ್ಮ ವೈಯಕ್ತಿಕ ಸ್ವಾತಂತ್ರ್ಯವನ್ನು ಗಳಿಸಿಕೊಳ್ಳುವುದು ಒಂದು ಕಡೆಯಾದರೆ, ಸಾಮಾಜಿಕ/ಗುಂಪಿನ/ಸಮಾನಮನಸ್ಕರ ಒತ್ತಡಗಳಿಗೆ ಮುಖಾಮುಖಿಯಾಗುವುದು ಅವರಿಗೆ ಸವಾಲೆನಿಸಿದೆ. ಪ್ರತಿ ಹತ್ತರಲ್ಲಿ ಆರು ಜನಕ್ಕೆ ಕಮ್ಮಿಯಿಲ್ಲದಂತೆ ತಮಗೆ ಸರಿ ಅನ್ನಿಸದ ಕೆಲಸವನ್ನೇ ಯಾವಾಗಲೂ ಮಾಡಬೇಕಾಗುತ್ತದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಬೆಂಗಳೂರು ಹೊರತು ಪಡಿಸಿ ಇತರ ಪ್ರದೇಶದ ಯುವಕರಲ್ಲಿ ಪ್ರತಿ ಹತ್ತರಲ್ಲಿ ನಾಲ್ಕಕ್ಕಿಂತ ಹೆಚ್ಚು ಜನ ಈ ಹೇಳಿಕೆಯನ್ನು ಒಪ್ಪುವುದಿಲ್ಲ. ಬೆಂಗಳೂರಿನ ಪ್ರತಿ ಹತ್ತರಲ್ಲಿ ಒಬ್ಬರು ಮಾತ್ರ ಈ ಹೇಳಿಕೆಯನ್ನು ಒಪ್ಪುವುದಿಲ್ಲ ಎಂದು ಹೇಳುತ್ತಾರೆ. ಇದರಿಂದ, ಬೆಂಗಳೂರಿನ ಯುವಜನತೆ ತಮಗೆ ಸರಿ ಅನ್ನಿಸಿದ್ದನ್ನು ಮಾಡುವುದಕ್ಕೆ ಸಮಾನ ಮನಸ್ಕರ ಒತ್ತಡ ಮತ್ತು ಅವರಿಗೆ ಎದುರಾಗುವ ಸನ್ನಿವೇಶಗಳ ನಡುವೆ ದ್ವಂದ್ವಕ್ಕೆ ಸಿಲುಕಿ ಕೊಂಡಿದ್ದಾರೆ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ.

ವೈಯಕ್ತಿಕ ಸ್ವಾತಂತ್ರ ಮತ್ತು ಗುಂಪಿನೊಂದಿಗೆ ಗುರುತಿಸಿಕೊಳ್ಳುವಿಕೆಗೆ ಸಂಬಂಧಪಟ್ಟಂತೆ ಕೇಳಿದ ಪ್ರಶ್ನೆ 'ನೀವು ಆಗಾಗ್ಗೆ ಒಂಟಿತನ ಅನುಭವಿಸುತ್ತೀರಾ?' ಪ್ರತಿ ಹತ್ತರಲ್ಲಿ ನಾಲ್ಕು ಜನ ಸಕಾರಾತ್ಮಕ ಉತ್ತರ ಕೊಟ್ಟಿದ್ದಾರೆ.

ನಗರ ಪ್ರದೇಶಗಳಿಗಿಂತಲೂ, ಗ್ರಾಮೀಣ ಪ್ರದೇಶಗಳಲ್ಲಿ ಒಂಟಿತನದ ಈ ಭಾವನೆ ಹೆಚ್ಚು. ಬೇರೆ ಬೇರೆ ವರ್ಗದ, ಲಿಂಗದ, ವೈವಾಹಿಕ ಸ್ಥಿತಿಯ ಆಧಾರದ ಮೇಲೆ, ಮೇಲಿನ ಹೇಳಿಕೆಯ ಬಗ್ಗೆ ಕೇಳಿದ ಪ್ರಶ್ನೆಗೆ ಬಂದ ಉತ್ತರಗಳಲ್ಲಿ ಹೆಚ್ಚಿನ ವ್ಯತ್ಯಾಸ ಕಂಡು ಬಂದಿಲ್ಲ.




| | [illegible] | [illegible] | [illegible] |
|---|---|---|---|
| [illegible] | 16 | 11 | 6 |
| [illegible] | 37 | 23 | 12 |
| [illegible] | 24 | 30 | 14 |
| [illegible] | 33 | 36 | 69 |

n - 8523

## ಒಂಟಿತನದ ಭಾವನೆ

**ಡಾ. ಅನಿತಾ (ಹೆಸರು ಬದಲಾಯಿಸಲಾಗಿದೆ) 25 ವರ್ಷ. ನಗರದಲ್ಲಿ ವಾಸಿಸುವ ವೈದ್ಯಕೀಯ ಸ್ನಾತಕೋತ್ತರ ಪದವೀಧರೆ.**

ಅನಿತಾ ಕರ್ನಾಟಕದ ಸಣ್ಣ ಪಟ್ಟಣವೊಂದರಲ್ಲಿ ಬೆಳೆದವರು. ತನ್ನ ವಾರಿಗೆಯ ಸ್ನೇಹಿತರಿಲ್ಲದೆ ಸಣ್ಣ ಪಟ್ಟಣದಲ್ಲಿ ವಾಸಿಸುವಾಗ ಒಂಟಿತನದ ಭಾವನೆ ಕಾಡಿದೆಯೇ ಎಂದು ಕೇಳಿದಾಗ ಅನಿತಾ ಹೇಳಿದ್ದು: ಆಗಾಗ್ಗೆ ತನಗೆ ಒಂಟಿತನದ ಭಾವನೆ ಬರುತ್ತದೆ ಅನ್ನುವುದು ಆಕೆಗೆ ಗೊತ್ತಿದೆ. ಕೆಲವೊಮ್ಮೆ ಅದು ನಿರಾಸೆಯ ಭಾವನೆಯನ್ನು ಮೂಡಿಸುತ್ತದೆ. ಆಕೆ ಹೇಳುವಂತೆ ಆಕೆಯ ಕುಟುಂಬದ ವಾತಾವರಣ ಅವರನ್ನು ಯಾವಾಗಲೂ ಒಂಟಿಯಾಗಿರಲು ಬಿಟ್ಟಿರಲಿಲ್ಲ. ಶಾಲೆಯಲ್ಲಿ ನಡೆದ ಪ್ರತಿಯೊಂದನ್ನೂ ಆಕೆ ತನ್ನ ತಾಯಿಗೆ ತಿಳಿಸುತ್ತಿದ್ದಳು. ಆಕೆಯ ಹಿರಿಯ ಅಣ್ಣನೂ ಸೇರಿದಂತೆ, ಆಕೆಯ ಇಡೀ ಕುಟುಂಬಕ್ಕೆ ಆಕೆಗೆ ಸಂಬಂಧಿಸಿದ ವಿಷಯಗಳು ತಿಳಿದಿರುತ್ತಿದ್ದವು. ಆಕೆಯ ತಂದೆಗೆ ಹೆಚ್ಚು ಸ್ನೇಹಿತರಿರಲಿಲ್ಲ. ಅವರು ಕಚೇರಿ ಬಿಟ್ಟ ತಕ್ಷಣ ಮನೆಗೆ ವಾಪಸಾಗಿ, ಆಕೆಯೊಂದಿಗೆ ಹೆಚ್ಚಿನ ಕಾಲ ಕಳೆಯುತ್ತಿದ್ದರು. ಆಕೆ ಹೇಳುವಂತೆ ಅವರಿಗೆ ಕುಟುಂಬಕ್ಕಾಗಿ ಪ್ರತ್ಯೇಕ ಸಮಯ ಮೀಸಲಿರಿಸುವ ಅಗತ್ಯವೇ ಇರಲಿಲ್ಲ, ಯಾಕೆಂದರೆ ಪ್ರತಿಯೊಬ್ಬರು ಮನೆಗೆ ಹಿಂತಿರುಗಿದ್ದಾಗಿನ ಪ್ರತಿ ಸಮಯವೂ ಕುಟುಂಬಕ್ಕೇ ಮೀಸಲಾಗಿತ್ತು. ದಿನನಿತ್ಯದ ಕೆಲಸ, ಮಾತುಕತೆಗಳೆಲ್ಲಾ ಮುಗಿದಂತೆ ಆಕೆ ಓದಲು ಕೂರುತ್ತಿದ್ದರು. ಶಾಲೆಯ ದಿನಗಳಲ್ಲಿ ಶಿಕ್ಷಕರೊಂದಿಗೆ ಆಕೆಗೆ ಉತ್ತಮ ಬಾಂಧವ್ಯವಿತ್ತು, ಹಾಗಾಗಿ ಜೀವನದಲ್ಲಿ ಯಾವತ್ತೂ ಒಂಟಿತನದ ಅಥವಾ ಅಸಹಾಯಕತೆಯ ಭಾವನೆ ಬರಲೇ ಇಲ್ಲ ಎಂದು ಹೇಳುತ್ತಾರೆ.

(ಇದು 'ಒಬ್ಬ ವೈದ್ಯೆಯಾಗಿ...' ಎಂಬ ವಿಷಯವಾಗಿ ಸಿಇಆರ್‌ಎಸ್‌ಎಸ್ ಇ ನಡೆಸಿದ ವ್ಯಕ್ತಿಗತ ಸಮೀಕ್ಷೆಯ ವರದಿಯಾಗಿದೆ).




n - 7675

ವೈಯಕ್ತಿಕ ಸ್ವಾತಂತ್ರ ಉಳಿಸಿಕೊಳ್ಳುವ ಮತ್ತು ಗುಂಪಿನಲ್ಲಿ ಗುರುತಿಸುವಿಕೆಗೆ ಸಂಬಂಧ ಪಟ್ಟಂತೆ ಕೇಳಿದ ಪ್ರಶ್ನೆಗಳನ್ನು ಆಧರಿಸಿ, ಗುಂಪಿನಲ್ಲಿ ಗುರುತಿಸಿಕೊಳ್ಳುವ ಒಂದು ಸಮಗ್ರ ಅನುಸೂಚಿಯನ್ನು ತಯಾರಿಸಲಾಯಿತು. ಅದರಲ್ಲಿ ಹೆಚ್ಚಿನ ಯುವಜನತೆ ದ್ವಂಧ್ವದ ಮುಳ್ಳಿನ ಮೇಲೆ ಕುಳಿತಂತೆ ಇದ್ದರು.

ಪ್ರತಿ ಮೂವರಲ್ಲಿ ಒಬ್ಬರು ಗುಂಪಿನಲ್ಲಿ ಗುರುತಿಸುವಿಕೆಗೆ ಮಹತ್ವಕೊಟ್ಟರೆ, ಪ್ರತಿ ಹತ್ತರಲ್ಲಿ ಒಬ್ಬರು ವೈಯಕ್ತಿಕ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವ ಬಗ್ಗೆ ಆಸಕ್ತಿ ತೋರಿದ್ದರು. ಈ ಅನುಸೂಚಿಯು ಕರ್ನಾಟಕ ರಾಜ್ಯದ ಯುವ ಜನತೆ ಎದುರಿಸುವ ದ್ವಂಧ್ವ ಮನೋಭಾವಕ್ಕೆ ಹಿಡಿದ ಕನ್ನಡಿಯಾಗಿದೆ.

## ಯುವಜನರ ಆತಂಕಗಳು




| | ಉದ್ಯೋಗಾವಕಾಶಗಳು | ರಸ್ತೆ ಅಪಘಾತ | ವೈಯಕ್ತಿಕ ಆರೋಗ್ಯ | ಹಿರಿಯರೊಂದಿಗೆ ಸಂವಾದ | ಕುಟುಂಬದ ಸದಸ್ಯರೊಂದಿಗೆ ವ್ಯತ್ಯಾಸಗಳು |
|---|---|---|---|---|---|
| [illegible] | 69 | 56 | 55 | 50 | 49 |

n - 8130

ರಾಜ್ಯದ ಯುವಜನರ ಅಭದ್ರತೆಯ ಭಾವನೆಗಳಿಗೆ ಕಾರಣಗಳೇನು? ಯುವಜನರು ಹೊಂದಿರಬಹುದಾದ ಆತಂಕಗಳಿಗೆ ಕಾರಣವಾಗಬಹುದಾದ 5 ವಿಷಯಗಳನ್ನು ಪಟ್ಟಿ ಮಾಡಿ, ಪ್ರತಿಕ್ರಿಯೆಗಾಗಿ ಮೂರು ಆಯ್ಕೆಗಳನ್ನು ಕೊಡಲಾಯಿತು. ಒಂದು, ಹೆಚ್ಚಿನ ಪ್ರಮಾಣ (ಆತಂಕಕ್ಕೆ ಸಂಬಂಧಪಟ್ಟಂತೆ), ಕಡಿಮೆ ಪ್ರಮಾಣ, ಸ್ವಲ್ಪಮಟ್ಟಿನ ಆತಂಕ ಅಥವಾ ಇಲ್ಲವೇ ಇಲ್ಲ. ಕರ್ನಾಟಕದ ಯುವಜನರ ಹೆಚ್ಚಿನ ಆತಂಕಕ್ಕೆ ಕಾರಣವಾದ ಅಂಶವೆಂದರೆ ಉದ್ಯೋಗ/ವೃತ್ತಿ. ಭವಿಷ್ಯದ ಉದ್ಯೋಗ ಮತ್ತು ಉದ್ಯೋಗಾವಕಾಶಗಳ ಬಗ್ಗೆ ಹತ್ತರಲ್ಲಿ ಏಳು ಜನ ಅಲ್ಪ ಪ್ರಮಾಣದಲ್ಲಿ ಅಥವಾ ಹೆಚ್ಚಿನ ಪ್ರಮಾಣದಲ್ಲಿ ಆತಂಕಕ್ಕೆ ಒಳಗಾಗಿದ್ದು ಕಂಡು ಬಂತು.




n - 8273

ಉದ್ಯೋಗವಕಾಶಗಳ ಬಗ್ಗೆ ಹೆಚ್ಚಿನ ಆತಂಕ ವ್ಯಕ್ತವಾಗಿದ್ದು ಗ್ರಾಮೀಣ ಯುವಜನತೆಯಲ್ಲಿ. ಹಳ್ಳಿಗಳಲ್ಲಿ ಪ್ರತಿ ನಾಲ್ವರಲ್ಲಿ ಮೂರು ಜನ ಭವಿಷ್ಯದ ಉದ್ಯೋಗವಕಾಶಗಳ ಬಗ್ಗೆ ಆತಂಕದ ಮನೋಭಾವದ ಸ್ಥಿತಿಯಲ್ಲಿದ್ದುದು ಕಂಡುಬಂತು. ಪಟ್ಟಣಗಳು ಮತ್ತು ಸಣ್ಣ ನಗರಗಳಲ್ಲಿ ಕೂಡ ಯುವಜನತೆ ತಮ್ಮ ವೃತ್ತಿ ಮತ್ತು ಉದ್ಯೋಗದ ಬಗ್ಗೆ ಆತಂಕ ವ್ಯಕ್ತಪಡಿಸಿದರು. ಬೆಂಗಳೂರಿನಲ್ಲಿ, ಪ್ರತಿ ಹತ್ತರಲ್ಲಿ ಮೂವರು ಭವಿಷ್ಯದ ಉದ್ಯೋಗ ಮತ್ತು ಕೆಲಸದ ಬಗ್ಗೆ ತಮಗಿದ್ದ ಯೋಚನೆ ಮತ್ತು ಕಾಳಜಿಯನ್ನು ವ್ಯಕ್ತಪಡಿಸಿದರು.

## ಭವಿಷ್ಯದ ಬಗೆಗಿನ ಆಶಾಭಾವನೆ

ಕರ್ನಾಟಕದ ಯುವಜನತೆ ತಮ್ಮ ಭವಿಷ್ಯದ ಬಗ್ಗೆ ಎಷ್ಟು ಆಶಾವಾದಿಗಳಾಗಿದ್ದಾರೆ? ತಮ್ಮ ಭವಿಷ್ಯದ ಚಿತ್ರಣವನ್ನು ಹೇಗೆ ಕಾಣಬಯಸುತ್ತಾರೆ ಎಂಬ ಪ್ರಶ್ನೆಯನ್ನು ಈ ಸಮೀಕ್ಷೆಯಲ್ಲಿ ಕೇಳಲಾಯಿತು. ಉತ್ತೇಜನಕಾರಿಯಾದ ಅಂಶವೆಂದರೆ, ಈ ವಿಚಾರವಾಗಿ ಯುವ ಜನರಲ್ಲಿ ಸ್ವಲ್ಪಮಟ್ಟಿನ ಆಶಾವಾದ ಮತ್ತು ಸಕಾರಾತ್ಮಕ ಚಿಂತನೆ ಕಂಡು ಬಂದದ್ದು. ಪ್ರತಿ ಹತ್ತರಲ್ಲಿ ಎಂಟಕ್ಕಿಂತಲೂ ಹೆಚ್ಚು ಜನ ತಮಗೆ ತುಂಬಾ ಒಳ್ಳೆಯ ಭವಿಷ್ಯವಿದೆ ಅಥವಾ ಉತ್ತಮ ಭವಿಷ್ಯವಿದೆ ಎಂದು ಹೇಳಿದ್ದಾರೆ. 30ರ ಅಂಚಿನಲ್ಲಿರುವವರಿಗೆ ಹೋಲಿಸಿದರೆ, 25 ಕ್ಕಿಂತಲೂ ಕಡಿಮೆ ವಯಸ್ಸಿನವರು ತಮ್ಮ ಭವಿಷ್ಯದ ಬಗ್ಗೆ ಆಶಾಭಾವನೆ ವ್ಯಕ್ತಪಡಿಸಿದ್ದಾರೆ. ಬಡವರಿಗೆ ಹೋಲಿಸಿದರೆ ಆರ್ಥಿಕವಾಗಿ ಅನುಕೂಲ ಸ್ಥಿತಿಯಲ್ಲಿ ಇರುವವರಲ್ಲಿ ತಮ್ಮ ಭವಿಷ್ಯದ ಬಗ್ಗೆ ಹೆಚ್ಚಿನ ಆಶಾವಾದ ವ್ಯಕ್ತವಾಗಿದೆ. ಯುವಜನರಲ್ಲಿ ಕಿರಿಯ ವಯಸ್ಸಿನವರು ವ್ಯಕ್ತಪಡಿಸುವ ಅಪರಿಮಿತ ಆದರ್ಶವಾದದ ಕಲ್ಪನೆಯು ಅವರ ಆಶಾವಾದದ ಮಾತುಗಳಲ್ಲಿ ಸ್ಪಷ್ಟವಾಗಿ ತೋರುತ್ತಿತ್ತು. ಇದೇ ರೀತಿಯ ಆಶಾವಾದವು ಅಖಿಲ ಭಾರತ ಯುವಜನರ ಅಧ್ಯಯನ ದಲ್ಲಿಯೂ ಕಂಡುಬಂದಿದೆ.




n - 3870

ಕರ್ನಾಟಕದ ಯುವಜನರ ಆಕಾಂಕ್ಷೆಗಳು ಮತ್ತು ಆತಂಕಗಳ ಸಮಗ್ರ ವಿಶ್ಲೇಷಣೆಯಿಂದ ತಿಳಿದು ಬರುವುದೇನೆಂದರೆ ಅವರು ತಮ್ಮ ರಾಜ್ಯವನ್ನು ಜ್ಞಾನಸಮಾಜವನ್ನಾಗಿ ರೂಪಿಸಲು ಹೊರಟಿರುವುದು ಸ್ಪಷ್ಟವಾಗಿ ತೋರುತ್ತದೆ. ವಿಧ್ಯಾಭ್ಯಾಸದ ಅವಕಾಶಗಳ ಬಗ್ಗೆ ಅವರು ಕೊಡುವ ಮಹತ್ವ ಇಲ್ಲಿ ವ್ಯಕ್ತವಾಗಿದೆ. ರಾಜ್ಯದ ಯುವಜನರು ಜವಾಬ್ದಾರಿಯನ್ನು ತೆಗೆದುಕೊಳ್ಳಲು ಏಕಮನಸ್ಸಿನಿಂದ ಬದ್ಧರಾಗಿದ್ದಾರೆ ಮತ್ತು ಸಕಾರಾತ್ಮಕ ದೃಷ್ಟಿಕೋನವನ್ನು ಹೊಂದಿರುವುದು ಕಾಣುತ್ತದೆ.

# ಯುವಜನರ ಜೀವನ ಶೈಲಿಯ ಆಯ್ಕೆ ಯ ಅವಕಾಶಗಳು

**ಯುವಜನತೆಯ ಜೀವನ ಶೈಲಿಯ ಆಯ್ಕೆಯು, ಅವರು ನಗರ ಪ್ರದೇಶ, ಅರೆ-ನಗರ ಅಥವಾ ಗ್ರಾಮಾಂತರ ಪ್ರದೇಶಗಳಲ್ಲಾಗಲಿ, ಎಲ್ಲೇ ವಾಸವಾಗಿರಲಿ ಅವರ ಆರ್ಥಿಕ ಸ್ಥಿತಿಗತಿಗಳಿಗೆ ನೇರವಾಗಿ ಸಂಬಂಧಿಸಿದೆ. ಪಟ್ಟಣಗಳಲ್ಲಿ ಮತ್ತು ಸಣ್ಣ ನಗರಗಳಲ್ಲಿ ಯುವಜನತೆಯ ಆಕಾಂಕ್ಷೆಯ ಮಟ್ಟ ಗಮನಾರ್ಹವಾಗಿ ಹೆಚ್ಚುತ್ತಿರುವ ಹಾಗೆಯೇ, ಅರೆ-ನಗರಗಳು ಬದಲಾವಣೆಯ ಮಾರ್ಗ ಮಧ್ಯದಲ್ಲಿ ಇರುವಂತೆ ಕಾಣುತ್ತದೆ.**

ಈ ಸಮೀಕ್ಷೆಯು ಯುವಜನರ ಜೀವನಶೈಲಿಯ ಆಯ್ಕೆಯ ಚಿತ್ರಣವನ್ನು ಕೊಡಲು ಪ್ರಯತ್ನಿಸಿದೆ. ಇದು ಅವರ ಆಯ್ಕೆಗಳ ಮೇಲಿನ ಕಾಲದ ಪ್ರಭಾವದ ಸ್ಪಷ್ಟ ನಿದರ್ಶನವಾಗಿದೆ.

## ವಿರಾಮ ಕಾಲದ ಚಟುವಟಿಕೆಗಳು

'ನಿಮ್ಮ ವಿರಾಮ ಕಾಲವನ್ನು ಹೇಗೆ ಕಳೆಯುತ್ತೀರಿ?' ಎಂದು ಯುವಜನರಿಗೆ ಕೇಳಿದ ಪ್ರಶ್ನೆಯಲ್ಲಿ ಐದು ವಿರಾಮ ಕಾಲದ ಚಟುವಟಿಕೆಗಳನ್ನು ವಿಶ್ಲೇಷಣೆಗೆ ತೆಗೆದುಕೊಳ್ಳಲಾಯಿತು. ಸ್ನೇಹಿತರ ಜೊತೆ ಹೊರಗೆ ಹೋಗುವುದು; ಪುಸ್ತಕ /ಮ್ಯಾಗಜಿನ್ /ನಿಯತಕಾಲಿಕೆಗಳನ್ನು ಓದುವುದು; ಯಾವುದಾದರೂ ಕ್ರೀಡೆ/ಆಟದಲ್ಲಿ ತೊಡಗಿಕೊಳ್ಳುವುದು; ಚಲನಚಿತ್ರ ವೀಕ್ಷಣೆ; ಮತ್ತು ಹವ್ಯಾಸವನ್ನು ರೂಢಿಸಿಕೊಳ್ಳುವುದು.




n – 8797

ರಾಜ್ಯದ ಯುವಜನರಲ್ಲಿ ಪ್ರತಿಶತ ಹದಿನೈದು ಜನರನ್ನು ಬಿಟ್ಟು ಉಳಿದವರಿಗೆ ಚಲನಚಿತ್ರ ವೀಕ್ಷಣೆಯು ಅತಿ ಸಾಮಾನ್ಯವಾದ ವಿರಾಮ ಕಾಲದ ಚಟುವಟಿಕೆಯಾಗಿದ್ದರೆ, ಪ್ರತಿ ಹತ್ತರಲ್ಲಿ ಎಂಟು ಜನರಿಗೆ ಸ್ನೇಹಿತರೊಂದಿಗೆ ಹೊರಗೆ ಹೋಗುವುದು ಅವರ ವಿರಾಮ ಕಾಲದ ಚಟುವಟಿಕೆಯಾಗಿದೆ. ಎಲೆಕ್ಟ್ರಾನಿಕ್ ಮಾಧ್ಯಮ ಮತ್ತು ಖಾಸಗಿ ಟೆಲಿವಿಷನ್ ಚಾನೆಲ್‌ಗಳ ಪ್ರಭಾವದಿಂದ (ಸ್ನೇಹಿತರ ಜೊತೆ ಆಗಾಗ್ಗೆ) ಯುವಜನರಿಗೆ ಚಲನಚಿತ್ರ ವೀಕ್ಷಿಸುವುದು ವಿರಾಮ ಕಾಲದ ಚಟುವಟಿಕೆಯಾಗಿರುವುದರಲ್ಲಿ ಆಶ್ಚರ್ಯವೇನಲ್ಲ.

ಬೆಂಗಳೂರಿನ ಯುವಜನತೆ ಪುಸ್ತಕಗಳನ್ನು ಮತ್ತು ಮ್ಯಾಗಜಿನ್‌ಗಳನ್ನು ಓದುವುದಕ್ಕೆ ಅತಿ ಕಡಿಮೆ ವಿರಾಮದ ಅವಧಿಯನ್ನು ಕೊಡುತ್ತಾರೆ. ಪಟ್ಟಣಗಳಲ್ಲಿ ಪ್ರತಿ ನಾಲ್ಕುಜನರಲ್ಲಿ ಮೂರು ಜನ ಸಮಯ ಸಿಕ್ಕಾಗ ಪುಸ್ತಕ ಮತ್ತು ಮ್ಯಾಗಜಿನ್‌ಗಳನ್ನು ಓದುವುದಾಗಿ ಹೇಳಿದ್ದಾರೆ.




n - 8910

## ಆಧುನಿಕ ಶೈಲಿಯ ಉಡುಗೆ

ಅತ್ಯಾಧುನಿಕ ಶೈಲಿಯಲ್ಲಿ ಬಟ್ಟೆ ತೊಡುವುದನ್ನು ಎಷ್ಟು ಮುಖ್ಯ ಎಂದು ಯುವಜನರು ಭಾವಿಸುತ್ತಾರೆ? ಅತ್ಯಾಧುನಿಕ ಶೈಲಿಯಲ್ಲಿ ಬಟ್ಟೆ ತೊಡುವುದು ಬಹಳ ಮುಖ್ಯ ಎಂದು ರಾಜ್ಯಾದ್ಯಂತ ಯುವಜನರು ಅಭಿಪ್ರಾಯಪಟ್ಟಿದ್ದಾರೆ. ಪ್ರತಿ ಹತ್ತು ಯುವಕರಲ್ಲಿ ಮೂವರು ಇದು ತುಂಬಾ ಮುಖ್ಯ ಎಂದು ಹೇಳಿದ್ದಾರೆ. ಒಟ್ಟಾರೆಯಾಗಿ ಆತ್ಯಾಧುನಿಕ ರೀತಿಯಲ್ಲಿ ಬಟ್ಟೆ ಧರಿಸುವುದು ತುಂಬಾ ಮುಖ್ಯ ಅಥವಾ ಮುಖ್ಯ ಎಂದು ದೃಢವಾಗಿ ಹೇಳಿದ್ದಾರೆ.

ವಾಸಸ್ಥಳದ ಆಧಾರದ ಮೇಲೆ ಪ್ರಶ್ನಿಸಿದಾಗ ಅವರ ಹೇಳಿಕೆಗಳಲ್ಲಿ ಗಮನಾರ್ಹ ವ್ಯತ್ಯಾಸ ಕಂಡು ಬಂತು. ಹಳ್ಳಿಗಳಲ್ಲಿ ಪ್ರತಿ ನಾಲ್ವರಲ್ಲಿ ಒಬ್ಬರು ಮಾತ್ರ ಆಧುನಿಕ ಶೈಲಿಯಲ್ಲಿ ಬಟ್ಟೆ ಧರಿಸುವುದು ತುಂಬಾ ಮುಖ್ಯ ಎಂದು ಹೇಳಿದ್ದಾರೆ. ಪಟ್ಟಣಗಳಲ್ಲಿ ಮತ್ತು ಸಣ್ಣ ನಗರಗಳಲ್ಲಿ ಪ್ರತಿ ಹತ್ತರಲ್ಲಿ ಮೂವರು ಅದೇ ಅಭಿಪ್ರಾಯವನ್ನು ತಾಳಿದ್ದಾರೆ. ಬೆಂಗಳೂರಿನ ಅರ್ಧದಷ್ಟು ಯುವಜನತೆ ಅದು ತುಂಬಾ ಮುಖ್ಯ ಎಂದು ಹೇಳಿದ್ದಾರೆ. ಅತ್ಯಾಧುನಿಕ ಶೈಲಿಯಲ್ಲಿ ಉಡುಪನ್ನು ಧರಿಸುವುದು ಸಮಾಜದಲ್ಲಿ ತಮ್ಮನ್ನು ಗುರುತಿಸಿಕೊಳ್ಳಲು ಮತ್ತು ಸಮಾನಮನಸ್ಕರ ಜೊತೆ ಬೆರೆಯಲು ಅಗತ್ಯವಾಗಿದೆ ಎಂದು ಭಾವಿಸುತ್ತಾರೆ.

ಯುವಜನತೆಯ ಜೀವನ ಶೈಲಿಯ ಆಯ್ಕೆಯು, ಅವರು ನಗರ ಪ್ರದೇಶ, ಅರೆ-ನಗರ ಅಥವಾ ಗ್ರಾಮಾಂತರ ಪ್ರದೇಶಗಳಲ್ಲಾಗಲಿ, ಎಲ್ಲೇ ವಾಸವಾಗಿರಲಿ ಅವರ ಆರ್ಥಿಕ ಸ್ಥಿತಿಗತಿಗಳಿಗೆ ನೇರವಾಗಿ ಸಂಬಂಧಿಸಿದೆ. ಪಟ್ಟಣಗಳಲ್ಲಿ ಮತ್ತು ಸಣ್ಣ ನಗರಗಳಲ್ಲಿ ಯುವಜನತೆಯ ಆಕಾಂಕ್ಷೆಯ ಮಟ್ಟ ಗಮನಾರ್ಹವಾಗಿ ಹೆಚ್ಚುತ್ತಿರುವ ಹಾಗೇ, ಅರೆ-ನಗರಗಳು ಬದಲಾವಣೆಯ ಮಾರ್ಗ ಮಧ್ಯದಲ್ಲಿ ಇರುವಂತೆ ಕಾಣುತ್ತದೆ. ನಿರ್ದಿಷ್ಟ ಶೈಲಿಯ ಬಗ್ಗೆ ಆಕಾಂಕ್ಷೆಯು ಇರಬಹುದಾದರೂ, ವಾಸ್ತವದಲ್ಲಿ ಅದು ಚಾಲನೆಗೆ ಬಂದೀತು ಎಂದು ಹೇಳಲು ಬರುವುದಿಲ್ಲ. ಅದಕ್ಕೆ ಅದರದ್ದೇ ಆದ ವ್ಯಾಪ್ತಿ ಮತ್ತು ಆಳವಾದ ಪರಿಣಾಮವಿದೆ. ಆದ್ದರಿಂದ ಆ ರೀತಿಯ ಆಕಾಂಕ್ಷೆಗಳು ಹಾಗೇ ಉಳಿದುಬಿಡುವ ಸಾಧ್ಯತೆ ಇದೆ.



## ರಾಜಕೀಯ ಸಮಾನತೆ ಮತ್ತು ಸಾಮಾಜಿಕ ಅಸಮಾನತೆಗಳ ಸ್ಪಷ್ಟ ಚಿತ್ರಣವು ರಾಜ್ಯದ ಯುವಸಮುದಾಯದ ಅಭಿಪ್ರಾಯಗಳಲ್ಲಿ ವ್ಯಕ್ತವಾಗಿದೆ.

ಒಂದು ರಾಜ್ಯದ ಯುವಜನತೆ ಆ ರಾಜ್ಯದ ರಾಜಕೀಯವನ್ನು, ಆಡಳಿತವನ್ನು ಮತ್ತು ಆರ್ಥಿಕ ವ್ಯವಸ್ಥೆಯೊಡನೆ ಮಿಳಿತವಾಗಿರುವ ಅಂಶಗಳನ್ನು ಗಮನಿಸುವ ಬಗೆ ಯಾವುದು? ಈ ಹಿನ್ನೆಲೆಯಲ್ಲಿ ನಮ್ಮ ಅಧ್ಯಯನ ತಂಡವು, ರಾಜ್ಯ ರಾಜಕೀಯವು ಸ್ಪಂದಿಸುವ ರೀತಿ, ಆರ್ಥಿಕ ಬೆಳವಣಿಗೆ ಮತ್ತು ನಾಗರಿಕ ಆಡಳಿತ ಎಂಬ ವಿಷಯಗಳನ್ನು ಮುಖ್ಯವಾಗಿಟ್ಟುಕೊಂಡು ಕೇಳಲಾದ ಸಂಕೀರ್ಣ ಪ್ರಶ್ನೆಗಳಿಗೆ ಯುವ ಜನತೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ನಡೆಸಿದ ಪ್ರಯತ್ನ ಇದಾಗಿತ್ತು.

### ಯುವಜನಾಂಗವು ಬದಲಾಯಿಸಿಕೊಳ್ಳಲು ಬಯಸುವ ಒಂದು ಅಂಶ

'ನೀವು ಬದಲಾಯಿಸಿಕೊಳ್ಳಲು ಬಯಸಬಹುದಾದ ಒಂದು ಅಂಶ ಯಾವುದು?' ಎಂಬ ಪ್ರಶ್ನೆಯನ್ನು ಮೊದಲಿಗೆ ಅವರ ಮುಂದಿಡಲಾಯಿತು. ಇದೊಂದು ಮುಕ್ತಪ್ರಶ್ನೆಯಾಗಿದ್ದು ಕೇಳುಗರು ತಮ್ಮ ಅನಿಸಿಕೆಯನ್ನು ಅಷ್ಟೇ ಮುಕ್ತವಾಗಿ ವ್ಯಕ್ತಪಡಿಸಬಹುದಾಗಿತ್ತು. ಅಲ್ಲಿ ದೊರೆತ ಅಭಿಪ್ರಾಯಗಳನ್ನು ಯಥಾವತ್ತಾಗಿ ಇಲ್ಲಿ ನೀಡಿ ನಂತರ ಅವುಗಳ ಅನುಸೂಚಿಯನ್ನು ಇಲ್ಲಿ ಕೊಡಲಾಗಿದೆ.




n-8403

ಹತ್ತು ಜನರ ಪೈಕಿ, ಉತ್ತರಿಸಿದ ಮೂವರ ಅಭಿಪ್ರಾಯದ ಪ್ರಕಾರ, ಅವರು ಬಡತನ ಮತ್ತು ಅಸಮಾನತೆಗಳನ್ನು ನಿರ್ಮೂಲನೆ ಮಾಡಲು ಬಯಸುತ್ತಿರುವುದಾಗಿ ತಿಳಿದು ಬಂತು. ಮಿಕ್ಕ ಪ್ರತಿ ಹತ್ತು ಮಂದಿಯ ಪೈಕಿ ಇಬ್ಬರಿಗೆ ಇದೇ ಪ್ರಶ್ನೆಯನ್ನು ಮುಂದಿಟ್ಟಾಗ ಅವರು ಭ್ರಷ್ಟಾಚಾರವನ್ನು ಕಿತ್ತೆಸೆದು, ಇಡೀ ರಾಜಕೀಯ ವ್ಯವಸ್ಥೆಯನ್ನೇ ಝುಳಝುಳ ತೊಳೆದು, ಮೌಲ್ಯಾಧಾರಿತ ಸಮಾಜವನ್ನು ಮರುನಿರ್ಮಾಣ ಮಾಡುವುದಾಗಿ ತಿಳಿಸಿದರು. ಇನ್ನುಳಿದ ಪ್ರತಿ ಹತ್ತು ಮಂದಿಯ ಪೈಕಿ ಒಬ್ಬರು ಮಾತ್ರ ಶಿಕ್ಷಣವನ್ನು ಕಡ್ಡಾಯಗೊಳಿಸುವುದಾಗಿ ತಿಳಿಸಿದರು. ಈ ಯುವಜನತೆಗೆ ಅವರ ತಲೆ ಮತ್ತು ಹೃದಯಗಳೆರಡೂ ಸರಿಯಾದ ಸ್ಥಾನದಲ್ಲೇ ಇದ್ದು, ಅವರು ಚುರುಕಾಗಿ ಆಲೋಚಿಸಬಲ್ಲವರಾಗಿದ್ದಾರೆ ಎಂಬುವುದು ಅವರ ಈ ಅನಿಸಿಕೆಗಳಿಂದ ಸ್ಪಷ್ಟವಾಗುತ್ತಿತ್ತು! ಸರಕಾರದ ಆಡಳಿತವು ಸಾಮಾಜಿಕವಾಗಿ ತನ್ನನ್ನು ತಾನು ಹೇಗೆ ಮತ್ತು ಯಾವುದಕ್ಕೆ ಎಷ್ಟು ಮಹತ್ವ ಕೊಟ್ಟುಕೊಂಡು ತೊಡಗಿಸಿಕೊಳ್ಳಬೇಕೆಂಬುದರ ಕುರಿತಾಗಿ ಅವರು ವ್ಯಕ್ತಪಡಿಸಿದ ಅಭಿಪ್ರಾಯಗಳು ತುಂಬ ವಿಶಾಲ ದೃಷ್ಟಿಕೋನದಲ್ಲಿ ವ್ಯಕ್ತಪಡಿಸಿದಂಥವಾಗಿದ್ದವು.

ಮಹಿಳೆಯರಿಗೆ ಗರಿಷ್ಠ ಪ್ರಮಾಣದ ಉತ್ತೇಜನ ಮತ್ತು ಸ್ಥಾನಮಾನಗಳನ್ನು ಕಲ್ಪಿಸುವ ಬಗ್ಗೆ ಯುವಕರು ಮತ್ತು ಯುವತಿಯರು ಇಬ್ಬರನ್ನೂ ಕೇಳಲಾದ ಪ್ರಶ್ನೆಗಳಿಗೆ ಇಬ್ಬರಿಂದಲೂ ವಿಭಿನ್ನ ಉತ್ತರಗಳು ದೊರೆತವು. ಶೇಕಡಾ 13ರಷ್ಟು ಯುವತಿಯರು ತಮಗೆ ಗರಿಷ್ಠ ಪ್ರಮಾಣದ ಉತ್ತೇಜನ ಮತ್ತು ಸ್ಥಾನಮಾನಗಳನ್ನು ಕಲ್ಪಿಸುವ ಬಗ್ಗೆ, ಅಭಿವೃದ್ಧಿ ಪಡಿಸುವ ಬಗ್ಗೆ ಮಾತಾಡಿದರೆ, ಕೇವಲ 3ರಷ್ಟು ಯುವಕರು ಮಾತ್ರ ಈ ಬಗ್ಗೆ ಇದೇ ಅನಿಸಿಕೆಯನ್ನು ವ್ಯಕ್ತಪಡಿಸಿದರು. ಎರಡರ ನಡುವೆ ಹತ್ತು ಪಾಯಿಂಟುಗಳಷ್ಟು ವ್ಯತ್ಯಾಸ ಮಾತ್ರವೇ ಇತ್ತು.

## ವಾಸ್ತವವಾಗಿ ಸರಕಾರವು ಯಾರ ಆಸಕ್ತಿಗಳಿಗೆ ಹೆಚ್ಚು ಪ್ರಾಮುಖ್ಯತೆ ನೀಡುತ್ತದೆ?

ಹೆಚ್ಚಿನ ಸಮಯ, ಸರಕಾರದ ಆಡಳಿತದ ಪ್ರಭಾವವು ತಿಳಿಯುವುದು, ಅದು ರಚಿಸುವ ಯೋಜನೆಗಳು ಅಥವಾ ಆಡಳಿತದ ಗುಣಮಟ್ಟದಿಂದಲೋ ಅಲ್ಲ, ಬದಲಾಗಿ, ಜನಸಾಮಾನ್ಯರ ಮೇಲೆ ಅದು ಬೀರಿರುವ ಪ್ರಭಾವದಿಂದಾಗಿ ಎಂಬ ವಿಷಯವಾಗಿ ಹಲವಾರು ಚರ್ಚೆಗಳೇ ನಡೆದಿವೆ. ತಮ್ಮ ಮತ್ತು ತಮ್ಮಂತಹ ಜನರ ಸಲುವಾಗಿ ಸರಕಾರವು ಆಸಕ್ತಿ ಮತ್ತು ಗಮನವಹಿಸಿ ಕಾಳಜಿ ತೋರುತ್ತಿದೆ ಎಂದು ನಮ್ಮ ಸಮಾಜದ ಯುವಜನತೆ ಭಾವಿಸಿದೆಯೇ? ಮೂರನೇ ಒಂದರಷ್ಟು ಜನ ಮಾತ್ರ ತಮ್ಮ ಕುರಿತಾಗಿ ಸರಕಾರಕ್ಕೆ ಕಾಳಜಿ ಇದೆ ಎಂದು ಭಾವಿಸಿದ್ದಾರೆ. ಹತ್ತರ ಪೈಕಿ ನಾಲ್ವರಿಗೆ 'ಕೇವಲ ಕೆಲವರಿಗೆ ಮಾತ್ರವೇ ಈ ಕಾಳಜಿ' ಎಂದೆನಿಸಿದರೆ, ಕಾಲುಭಾಗಕ್ಕಿಂತ ಕಡಿಮೆ ಜನರಿಗೆ 'ಸರಕಾರಕ್ಕೆ ಯಾರ ಬಗ್ಗೆಯೂ ಆಸ್ಥೆ ಇಲ್ಲವೆಂದೇ' ದಟ್ಟವಾಗಿ ಅನಿಸಿದೆ.




n - 8615

## ಸರಕಾರೀ ಸಂಸ್ಥೆಗಳಲ್ಲಿ ನಂಬಿಕೆ

ನಮ್ಮ ರಾಜ್ಯದ ಯುವಜನತೆ ಸರಕಾರೀ ಸಂಸ್ಥೆಗಳನ್ನು ಎಷ್ಟರ ಮಟ್ಟಿಗೆ ನಂಬಿದ್ದಾರೆ ಅಥವಾ ಅವಲಂಬಿಸಿದ್ದಾರೆ? ಎಂಬುವುದೊಂದು ಪ್ರಶ್ನೆಯನ್ನು ಯುವಜನರಿಗೆ ಕೇಳಲಾಯಿತು. ಅಧ್ಯಯನಕ್ಕೆ ಒಳಪಟ್ಟ ಒಟ್ಟು ಆರು ಸಂಸ್ಥೆಗಳ ಬಗ್ಗೆಯೇ ನಮ್ಮ ಯುವಜನರನ್ನು ಪ್ರಶ್ನಿಸಲಾಯಿತು. ಆಯ್ಕೆ ಮಾಡಿಕೊಳ್ಳಲಾದ ಆಡಳಿತ ಸಂಸ್ಥೆಗಳೆಂದರೆ ಕೇಂದ್ರ ಸರಕಾರ, ರಾಜ್ಯ ಸರಕಾರ, ಸ್ಥಳೀಯ ಆಡಳಿತ, ಶಾಸಕಾಂಗ, ನ್ಯಾಯಾಂಗ ಮತ್ತು ಆರಕ್ಷಕ ವ್ಯವಸ್ಥೆ. ಈ ರೀತಿ ಆಯ್ಕೆ ಮಾಡಿಕೊಂಡ ಸಂಸ್ಥೆಗಳ ಮೇಲೆ ನಮ್ಮ ಯುವನಾಗರೀಕರು ಇಟ್ಟಿರುವ ನಂಬಿಕೆಯ ಕುರಿತಾಗಿ, ಅತ್ಯಂತ ಹೆಚ್ಚು, ಸ್ವಲ್ಪ ಮಟ್ಟಿಗೆ, ಅಷ್ಟೇನೂ ಇಲ್ಲ ಮತ್ತು ಇಲ್ಲವೇ ಇಲ್ಲ ಎಂಬ ನಾಲ್ಕು ಆಯ್ಕೆಗಳಿದ್ದ ಪ್ರಶ್ನೆಗಳನ್ನು ಕೇಳಲಾಯಿತು.




| | ಕೇಂದ್ರ ಸರಕಾರ | ರಾಜ್ಯ ಸರಕಾರ | ಸ್ಥಳೀಯ ಸರಕಾರ | ಪೋಲಿಸ್ | ನ್ಯಾಯಾಲಯ | ಶಾಸಕಾಂಗ |
|---|---|---|---|---|---|---|
| ಇಲ್ಲವೇ ಇಲ್ಲ | 3 | 5 | 6 | 10 | 10 | 19 |
| ಬಹಳ ಇಲ್ಲ | 12 | 15 | 20 | 29 | 26 | 31 |
| ಕೆಲವು ಮಟ್ಟಿಗೆ | 25 | 43 | 42 | 38 | 41 | 34 |
| ಬಹಳ ಮಟ್ಟಿಗೆ | 60 | 37 | 32 | 23 | 23 | 16 |



ಪ್ರಶ್ನೆ ಕೇಳಲಾದ ಪ್ರತಿ ಹತ್ತು ಜನರ ಪೈಕಿ ಆರು ಜನರ ಪ್ರಕಾರ, ಅವರು ಕೇಂದ್ರ ಸರಕಾರದ ಆಡಳಿತದಲ್ಲಿ ಅತ್ಯಂತ ಹೆಚ್ಚು ವಿಶ್ವಾಸವಿಟ್ಟಿರುವುದಾಗಿ ತಿಳಿದು ಬಂದಿತು. ಸ್ವಲ್ಪ ಮಟ್ಟಿಗೆ ಎಂದು ಉತ್ತರಿಸಿದವರ ಸಂಖ್ಯೆಯನ್ನು ಸೇರಿಸಿದರೆ, ಅಂಕಿ ಅಂಶವು ಶೇಕಡಾ 85ಕ್ಕೆ ಏರುತ್ತದೆ. ಮೂರನೇ ಒಂದು ಭಾಗದಷ್ಟು ಜನ ರಾಜ್ಯ ಸರಕಾರದ ಆಡಳಿತದಲ್ಲಿ ಅತ್ಯಂತ ಹೆಚ್ಚು ವಿಶ್ವಾಸವಿಟ್ಟಿದ್ದುದಾಗಿ ತಿಳಿದು ಬಂತು. ಸ್ವಲ್ಪ ಮಟ್ಟಿಗೆ ಎಂದು ಉತ್ತರಿಸಿದವರ ಸಂಖ್ಯೆಯನ್ನು ರಾಜ್ಯ ಸರಕಾರದಲ್ಲಿ ಅತ್ಯಂತ ಹೆಚ್ಚು ವಿಶ್ವಾಸವಿಟ್ಟವರ ಗುಂಪಿಗೆ ಸೇರಿಸಿದಾಗ, ಕೇಂದ್ರ ಸರಕಾರದಲ್ಲಿ ವಿಶ್ವಾಸವಿಟ್ಟವರ ಸಂಖ್ಯೆಗೇ ಅದು ಹೆಚ್ಚು ಹತ್ತಿರವಿದ್ದಂತೆಯೂ ಕಾಣಿಸಿತು. ಪ್ರತಿ ಹತ್ತು ಜನರ ಪೈಕಿ ಮೂವರ ಅಭಿಪ್ರಾಯಗಳನ್ನು ಗಮನಿಸಿದಾಗ ಅವರು ಸ್ಥಳೀಯ ಆಡಳಿತದಲ್ಲೇ ಹೆಚ್ಚು ವಿಶ್ವಾಸವಿಟ್ಟಿದ್ದ ಅಂಶ ತಿಳಿದುಬಂತು.

ಪ್ರತಿ ಹತ್ತರ ಪೈಕಿ ನಾಲ್ವರ ಅಭಿಪ್ರಾಯವು ಸ್ಥಳೀಯ ಆಡಳಿತದಲ್ಲಿ ವಿಶ್ವಾಸದ ಕುರಿತಾದುದಾಗಿತ್ತು. ಆ ಮೂಲಕ ಮುಕ್ಕಾಲು ಪಾಲು ಜನರು ಸ್ವಲ್ಪ ವಿಶ್ವಾಸವನ್ನು ಅಥವಾ ಹೆಚ್ಚಿನ ಮಟ್ಟದ ನಂಬುಗೆಯನ್ನು ಸ್ಥಳೀಯ ಆಡಳಿತದಲ್ಲೇ ಇಟ್ಟುಕೊಂಡುದುದು ಗೋಚರಿಸಿತು. ಹತ್ತಿರ ಕಾಲು ಭಾಗದಷ್ಟು ಜನರು ಮಾತ್ರ ಅತ್ಯಂತ ಹೆಚ್ಚು ವಿಶ್ವಾಸವನ್ನು ಮತ್ತು ಪ್ರತಿ ಹತ್ತರ ಪೈಕಿ ನಾಲ್ಕು ಜನರು ನ್ಯಾಯಾಂಗ ವ್ಯವಸ್ಥೆಯಲ್ಲಿ ಸ್ವಲ್ಪ ಮಟ್ಟಿಗೆ ವಿಶ್ವಾಸವನ್ನು ಇಟ್ಟಿದ್ದುದು ತಿಳಿದುಬಂತು. ಮೂರನೇ ಎರಡರಷ್ಟು ಜನರು ಈ ನ್ಯಾಯಾಂಗ ವ್ಯವಸ್ಥೆಯಲ್ಲಿ ಒಂದೇ ಸಲಕ್ಕೆ ಅತ್ಯಂತ ಹೆಚ್ಚು ವಿಶ್ವಾಸವಿಟ್ಟವರಾಗಿದ್ದರು ಅಥವಾ ಸ್ವಲ್ಪ ಮಟ್ಟಿಗೆ ವಿಶ್ವಾಸವಿಟ್ಟವರಾಗಿದ್ದರು. ಹತ್ತಿರ ನಾಲ್ಕನೇ ಒಂದು ಭಾಗದಷ್ಟು ಯುವಜನತೆ ಪೋಲಿಸ್ ವ್ಯವಸ್ಥೆಯಲ್ಲಿ ಅತ್ಯಂತ ಹೆಚ್ಚು ವಿಶ್ವಾಸವಿಟ್ಟುದುದಾಗಿ ಕಂಡು ಬಂತು. ಮಿಕ್ಕ ಮೂರನೇ ಒಂದು ಪಾಲಿನಷ್ಟು ಜನ ಸ್ವಲ್ಪ ಮಟ್ಟಿಗೆ ಪೋಲಿಸ್ ವ್ಯವಸ್ಥೆಯನ್ನು ನಂಬಿದ್ದರು. ಈ ಎಲ್ಲ ಅಂಕಿ-ಅಂಶಗಳನ್ನು ಪರಿಶೀಲಿಸಿ, ಒಟ್ಟುಗೂಡಿಸಿದಾಗ, ಪ್ರತಿ ಹತ್ತು ಜನರ ಪೈಕಿ, ಆರು ಜನ ಪೋಲಿಸ್ ವ್ಯವಸ್ಥೆಯಲ್ಲಿ ಅತ್ಯಂತ ಹೆಚ್ಚು ಅಥವಾ ಸ್ವಲ್ಪ ಮಟ್ಟಿಗೆ ವಿಶ್ವಾಸವಿಟ್ಟುದುದಾಗಿ ಕಂಡು ಬಂತು. ಅತ್ಯಂತ ಕೆಳಮಟ್ಟದಲ್ಲಿ ವಿಶ್ವಾಸಕ್ಕೆ ಪಾತ್ರವಾದ ಸಂಸ್ಥೆಗಳ ಪಟ್ಟಿಯಲ್ಲಿ ಇದ್ದ ಸಂಸ್ಥೆಯೆಂದರೆ ಶಾಸಕಾಂಗ. ಅರ್ಧಕ್ಕರ್ಧ ಯುವಜನತೆ ಶಾಸಕಾಂಗದಲ್ಲಿ ಅತ್ಯಂತ ಹೆಚ್ಚು ಅಥವಾ ಸ್ವಲ್ಪ ಮಟ್ಟಿಗೆ ಮಾತ್ರವೇ ವಿಶ್ವಾಸ ಇಟ್ಟುದುದಾಗಿ ತಿಳಿಯಿತು.

## ಯುವಜನಾಂಗ ಮತ್ತು ಸಾಮಾಜಿಕ ನ್ಯಾಯ

ಸಾಮಾಜಿಕ ನ್ಯಾಯದ ಕುರಿತಾದ ವ್ಯಾಪಕವಾದ ಕಾಳಜಿಯನ್ನು ನಮ್ಮ ಯುವಜನತೆ ಹೇಗೆ ಅರ್ಥೈಸಿಕೊಂಡಿರಬಹುದು? ಉನ್ನತ ಶಿಕ್ಷಣ ಮತ್ತು ವೃತ್ತಿಪರ ಕೋರ್ಸುಗಳ ಅಧ್ಯಯನಕ್ಕಾಗಿ ಸ್ಥಾನ ಮೀಸಲಿರಿಸುವಿಕೆ/ಕಾಯ್ದಿರಿಸುವಿಕೆ – ಈ ವಿಷಯವಾಗಿ ನಮ್ಮ ಯುವಜನರ ಅಭಿಪ್ರಾಯಗಳನ್ನು ತಿಳಿದುಕೊಳ್ಳುವ ಮತ್ತು ಅರ್ಥಮಾಡಿಕೊಳ್ಳುವ ಸಲುವಾಗಿ ಸಮೀಕ್ಷೆ ನಡೆಸಲಾಯಿತು. ನಾಲ್ಕು ಹೇಳಿಕೆಗಳನ್ನು ಕೊಟ್ಟು ಅವುಗಳಲ್ಲಿ ಅವರ ಅಭಿಪ್ರಾಯಗಳನ್ನು ಪ್ರತಿಫಲಿಸುವ ಯಾವುದಾದರೊಂದು ಅಂಶವನ್ನು ಆಯ್ಕೆ ಮಾಡಲು ಅವರನ್ನು ಕೇಳಲಾಯಿತು. ಆ ನಾಲ್ಕು ಹೇಳಿಕೆಗಳೆಂದರೆ:

ಅ) ಸ್ಥಾನಗಳನ್ನು ಹಿಂದುಳಿದ ಮತ್ತು ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗಾಗಿ ಮಾತ್ರ ಕಾಯ್ದಿರಿಸಬೇಕು;

ಆ) ಸ್ಥಾನಗಳನ್ನು ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗಾಗಿ ಮಾತ್ರ ಕಾಯ್ದಿರಿಸಬೇಕು, ಹಿಂದುಳಿದವರಿಗಾಗಿ ಬೇಡ;

ಇ) ಸ್ಥಾನಗಳನ್ನು ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗಾಗಿ ಮಾತ್ರ ಕಾಯ್ದಿರಿಸಬೇಕು. ಆದರೆ ಆರ್ಥಿಕವಾಗಿ ಹಿಂದುಳಿದವರಿಗಾಗಿ ಮಾತ್ರ ಕಾಯ್ದಿರಿಸಬೇಕು; ಮತ್ತು

ಈ) ಉನ್ನತ ಶಿಕ್ಷಣಕ್ಕಾಗಿ ಯಾವುದೇ ಜಾತಿಯವರಿಗೂ ಸ್ಥಾನಗಳನ್ನು ಕಾಯ್ದಿರಿಸಬಾರದು.




n-8197

ಪ್ರತಿ ಹತ್ತು ಜನರ ಪೈಕಿ, ನಾಲ್ಕು ಜನ ಇವತ್ತಿಗೂ ಇರುವಂತೆಯೇ, ಪರಿಶಿಷ್ಟ ಜಾತಿ, ಪಂಗಡ ಮತ್ತು ಇತರ ಹಿಂದುಳಿದ ವರ್ಗದವರಿಗೆ ಸ್ಥಾನಗಳನ್ನು ಕಾಯ್ದಿರಿಸಬೇಕು ಎನ್ನುವ ಅಭಿಪ್ರಾಯದವರಾಗಿದ್ದರು. ಉಳಿದ ನಾಲ್ಕನೇ ಒಂದರಷ್ಟು ಜನ ಸ್ಥಾನಗಳನ್ನು ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗಾಗಿ ಮತ್ತು ಹಿಂದುಳಿದವರಲ್ಲೇ ದುರ್ಬಲರಿಗಾಗಿ ಮಾತ್ರ ಕಾಯ್ದಿರಿಸಬೇಕು ಎನ್ನುವವರಾಗಿದ್ದರು. ಪ್ರತಿ ಹತ್ತು ಜನರ ಪೈಕಿ ಒಬ್ಬರು ಮಾತ್ರ ಸ್ಥಾನಗಳನ್ನು ಕಾಯ್ದಿರಿಸುವಿಕೆಯು ಕಡ್ಡಾಯವಾಗಿ ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗಾಗಿಯೇ ಇರಬೇಕೆಂದು ಬಯಸುವವರಾಗಿದ್ದರು. ಇನ್ನುಳಿದ ಪ್ರತಿ ಹತ್ತು ಮಂದಿಯ ಪೈಕಿ, ಇಬ್ಬರು ಯಾರೊಬ್ಬರಿಗೂ ಸ್ಥಾನಗಳನ್ನು ಕಾಯ್ದಿರಿಸುವ ಕೆಲಸ ಬೇಡವೆಂದು ವಿರೋಧಿಸುವವರಾಗಿದ್ದರು. ರಾಷ್ಟ್ರೀಯ ಯುವ ಅಧ್ಯಯನದ ಅಭಿಪ್ರಾಯಗಳಿಗೂ, ಇಲ್ಲಿ ಸೂಚಿಸಿರುವ ಅಂಕಿ–ಅಂಶಗಳಿಗೂ ಹೆಚ್ಚು ವ್ಯತ್ಯಾಸವೇನಿಲ್ಲ.

## ನನ್ನ ಮೊದಲ ಕೆಲಸ

**ಶ್ರೀ. ಶರಣಪ್ಪ, 28 ವರ್ಷ ವಯಸ್ಸು, ಕಾಲೇಜಿನಲ್ಲಿ ಉಪನ್ಯಾಸಕ**

ದಲಿತ ಕುಟುಂಬವೊಂದರಿಂದ ಬಂದಿರುವ ನನಗೆ ಅವಕಾಶವಂಚಿತನಾಗುವುದೆಂದರೆ ಏನು ಎಂಬುದರ ಬಗ್ಗೆ ಅನುಭವವಿದೆ. ನನ್ನ ತಂದೆ ಒಬ್ಬ ಸಾಧಾರಣ ಮನುಷ್ಯ. ಆತ ಬೆಳೆದು ದೊಡ್ಡವನಾದಾಗ, ಊರಿಗಿದ್ದ ಒಂದೇ ಶಾಲೆಯಲ್ಲಿ ದಲಿತರು ಸೇರಿಕೊಳ್ಳುವ ಹಾಗಿರಲಿಲ್ಲ. ಶಾಲೆಗೆ ಹೋಗಬಲ್ಲವನಾಗಿದ್ದ ಓರಗೆಯ ಹುಡುಗನೊಬ್ಬನ ಸಹಾಯದಿಂದ ಆತ ತಕ್ಕಮಟ್ಟಿಗೆ ಓದು ಬರೆಯುವುದನ್ನು ಕಲಿತಿದ್ದ. ತನ್ನ ಅಣ್ಣನೊಡನೆ ಹೊಲಗಳಲ್ಲಿ ಕೂಲಿ ಮಾಡಿಕೊಂಡೇ ನಮ್ಮ ತಂದೆ ತನ್ನ ಬಾಲ್ಯವನ್ನು ಕಳೆದವನು.

ನನ್ನ ತಾಯಿ ಶಾಲೆಗೆಂದೂ ಹೋದವಳೇ ಅಲ್ಲ ಮತ್ತು ಇವತ್ತಿಗೂ ಓದಲು, ಬರೆಯಲು ಆಕೆಗೆ ಗೊತ್ತಿಲ್ಲ. ಶ್ರಮಜೀವಿಯಾಗಿದ್ದ ಅಪ್ಪ, ಬೇಗನೆ ಊರಿನಲ್ಲಿ ಒಂದು ಅಂಗಡಿ ತೆರೆಯುವಷ್ಟರ ಮಟ್ಟಿಗೆ ಬೆಳೆದ. ಅದೊಂದು ಕಷ್ಟಕಾರ್ಪಣ್ಯಗಳೇ ತುಂಬಿದ್ದ ಬದುಕು. ನಾವು ವಾಸ ಮಾಡುತ್ತಿದ್ದ ದಲಿತರ ಓಣಿಯಲ್ಲಿಯೇ ನಮ್ಮ ತಂದೆಯ ಅಂಗಡಿ ಇದ್ದುದು. ಬಾಲ್ಯವೆಂಬುದು ನಮ್ಮ ಪಾಲಿಗೆ ಕಠಿಣ ಅನುಭವವಾಗಿತ್ತು. ನಾನು 7 ವರ್ಷದವನಾದಾಗ ನಮ್ಮ ಊರಿನಲ್ಲಿ ಆರಂಭಗೊಂಡ ಸರಕಾರೀ ಶಾಲೆಯೊಂದಕ್ಕೆ ನನ್ನನ್ನು ಸೇರಿಸಲಾಯಿತು. ಯಾವಾಗಲೋ ಒಮ್ಮೆ ಬರುತ್ತಿದ್ದ, ಒಳ್ಳೆಯ ಮೇಷ್ಟ್ರುಗಳು ನಮಗೆ ಸಿಕ್ಕಿದರು. ನನ್ನನ್ನು ಅವರು ಚೆನ್ನಾಗೇ ಕಾಣುತ್ತಿದ್ದರು.

ಶಾಲೆಯ ಓದು ಮುಗಿದ ನಂತರ ಅಪ್ಪ ನನ್ನನ್ನು ಪಕ್ಕದ ಊರಿನ ಪದವಿಪೂರ್ವ ಕಾಲೇಜೊಂದಕ್ಕೆ ಸೇರಿಸಿದರು. ದಿನಾಲೂ ನಾನು ಬಸ್ಸಿನಲ್ಲೇ ಕಾಲೇಜಿಗೆ ಹೋಗಬೇಕಾಗುತ್ತಿತ್ತು. ಅದೇ ಊರಿನಲ್ಲಿ ನಾನು ನನ್ನ ಪದವಿಯನ್ನೂ ಮುಗಿಸಿಕೊಂಡೆ. ಮನೆಯಲ್ಲಿ ನನ್ನನ್ನು ಸ್ನಾತಕೋತ್ತರ ಅಧ್ಯಯನಕ್ಕಾಗಿ ಗುಲ್ಬರ್ಗಕ್ಕೆ ಕಳಿಸಿದರು. ಹಾಸ್ಟೆಲಿನಲ್ಲಿದ್ದುಕೊಂಡೇ ನಾನು ನನ್ನ ವ್ಯಾಸಂಗವನ್ನು ಯಶಸ್ವಿಯಾಗಿ ಮುಗಿಸಿಕೊಂಡೆ. ನನ್ನ ಎಂ.ಎ ಓದಿನ ನಂತರ ಹಲವಾರು ಕಾಲೇಜುಗಳಲ್ಲಿ ನಾನು ಉಪನ್ಯಾಸಕ ವೃತ್ತಿಗೆ ಅರ್ಜಿ ಹಾಕಿದೆ. ನನ್ನ ಓದಿನ ಬಗ್ಗೆ, ನನ್ನ ಪಾಲಕರ ಬಗ್ಗೆ, ಅವರೇನು ಮಾಡುತ್ತಾರೆಂಬುದರ ಬಗ್ಗೆ ಹಲವಾರು ಪ್ರಶ್ನೆಗಳನ್ನು ನನಗೆ ಕೇಳಲಾಯಿತು. ಎಲ್ಲಕ್ಕೂ ಉತ್ತರ ಕೊಡಲು ನಾನು ಪ್ರಯತ್ನಿಸಿದೆ.

ನನ್ನನ್ನೊಬ್ಬ ಉಪನ್ಯಾಸಕನನ್ನಾಗಿ ತೆಗೆದುಕೊಳ್ಳಲು ಇವೆಲ್ಲ ವಿವರಗಳು ಯಾಕೆ ಬೇಕಿದ್ದೀತು ಎಂದು ನನಗೆ ಅಚ್ಚರಿಯಾಗುತ್ತಿತ್ತು. ನಾನು ಹೋದ ಪ್ರತಿಯೊಂದು ಸಂದರ್ಶನದಲ್ಲೂ ನನ್ನ ಜಾತಿಪ್ರಮಾಣಪತ್ರದ ಮೂಲಪ್ರತಿಯನ್ನು ಕೇಳುತ್ತಿದ್ದರು. ನನ್ನ ಹೆಸರಿನಿಂದ ನನ್ನ ಜಾತಿಯನ್ನು ನೀವು ಗೊತ್ತು ಮಾಡಿಕೊಳ್ಳಲಾರಿರಿ. ನನ್ನ ಹೆಸರನ್ನು ಕೇಳಿದ ನಂತರ ಅವರು ಮತ್ತಷ್ಟೂ ವಿವರಗಳನ್ನು ಕೆದಕುತ್ತಿದ್ದರು. ನನಗೆ ಆಗ ತಿಳಿಯುತ್ತಿತ್ತು, ಇಷ್ಟೆಲ್ಲ ಪ್ರಶ್ನೆಗಳನ್ನು ನನ್ನ ಜಾತಿಯನ್ನು ತಿಳಿಯಲಿಕ್ಕಾಗಿ ಕೇಳುತ್ತಿದ್ದಾರೆ ಅಂತ.

ಕಡೆಗೆ ಒಂದು ಪದವಿ ಕಾಲೇಜಿನಲ್ಲಿ ನನಗೆ ಉಪನ್ಯಾಸಕ ಕೆಲಸ ದೊರೆತಾಗ ನನಗಂತೂ ಬಹಳ ಸಂತೋಷವಾಗಿತ್ತು. ಮನೆಗೆ ಹೋದವನೇ ಅಪ್ಪ ಅವ್ವರಿಗೆ ವಿಷಯ ತಿಳಿಸಿದೆ. ನಮ್ಮ ಬಂಧುಬಾಂಧವರಲ್ಲೇ ಉಪನ್ಯಾಸಕ ವೃತ್ತಿಗೆ ಕಾಲಿಟ್ಟಿದ್ದ ಮೊದಲಿಗ ನಾನಾಗಿದ್ದೆ. ಅವರೆಲ್ಲ ನನ್ನನ್ನು ತುಂಬಾ ಸಂತೋಷದಿಂದಲೇ ಆಶೀರ್ವದಿಸಿದರು. ಕೆಲಸದ ಮೊದಲ ದಿನ ನಾನು ಉದ್ವಿಗ್ನನಾಗಿದ್ದೆ. ಶಿಸ್ತಿನಿಂದ ತಯಾರಾದವನೇ ಮೊದಲು ಪ್ರಾಂಶುಪಾಲರ ಕೊಠಡಿಗೆ ಹೋದೆ. ಅವರೂ ನನ್ನನ್ನು ಚೆನ್ನಾಗಿ ಮಾತಾಡಿಸಿದರು. ಅವರೇ ನನ್ನ ಮೊದಲ ಪ್ರಾಂಶುಪಾಲರಾಗಿ ಸಿಕ್ಕಿದ್ದು ನನ್ನ ಪುಣ್ಯವೆಂದೇ ನಾನು ಭಾವಿಸುತ್ತೇನೆ. ನಾನೊಬ್ಬ ದಲಿತನೆಂದು ತಿಳಿದ ನಂತರ ಉಳಿದವರು ತೋರಿಸಬಹುದಾದ ಪ್ರತಿಕ್ರಿಯೆಯ ಕುರಿತು ಹೆಚ್ಚು ತಲೆಕೆಡಿಸಿಕೊಳ್ಳಬಾರದಾಗಿ ಅವರು ನನಗೊಂದು ಸಣ್ಣ ಎಚ್ಚರಿಕೆಯನ್ನೂ ಕೊಟ್ಟರು.

ನನಗೆ ಎಲ್ಲ ಒಗಟೆನಿಸಿತು. ಆ ವಿಷಯವೇಕೆ ವ್ಯತ್ಯಾಸವುಂಟು ಮಾಡಬೇಕು ಎಂದು ನನಗೆ ಸಹಜವಾಗಿ ಅನಿಸಿತು. ವಿಭಾಗದ ಮುಖ್ಯಸ್ಥರನ್ನು ಕರೆದು ನನ್ನನ್ನವರಿಗೆ ಪರಿಚಯಿಸಲಾಯಿತು. ಅವರು ತುಂಬಾ ಬಿಗುವಾಗಿಯೂ, ಕಟ್ಟುನಿಟ್ಟಾಗಿಯೂ ಇದ್ದರು. ನಂತರ ನಮ್ಮ ಪ್ರಾಂಶುಪಾಲರು ನನ್ನನ್ನು ಸ್ಟಾಫ್‌ರೂಮಿಗೆ ಕರೆದುಕೊಂಡು ಹೋದರು. ಹಾಗೆ ಹೋಗುತ್ತಿರುವಾಗ ಅವರು ತುಂಬಾ ಸಹಜವೆಂಬಂತೆ ಆ ವಿಭಾಗದಲ್ಲಿ ಸೇರ್ಪಡೆಯಾಗಿರುವ ಮೊಟ್ಟಮೊದಲ ಹಿಂದುಳಿದ ಅಧ್ಯಾಪಕ ನಾನೇ ಎಂಬುದನ್ನು ತಿಳಿಸಿದರು. ನನಗೆ ಅವರದನ್ನು ಮೆಚ್ಚುಗೆಯಿಂದ ಹೇಳಿದರೋ, ಚುಚ್ಚಲೆಂದು ಹೇಳಿದರೋ ಗೊಂದಲವಾಯಿತು. ಉಳಿದೆಲ್ಲರು ನನ್ನೊಡನೆ ಮಾತಾಡುತ್ತಿದ್ದರೂ, ಒಂದು ಅಂತರದಲ್ಲೇ ಇರುತ್ತಿದ್ದರು. ಅವರಂತೆಯೇ ನಾನಿದ್ದರೂ, ಅವರಿಗಿಂತ ನಾನು ಬೇರೆಯವನೇ ಆಗಿದ್ದೆ. ಕೆಲವರು ನನ್ನೊಡನೆ ತಮ್ಮ ಹೆಚ್ಚುಗಾರಿಕೆಯನ್ನು ತೋರಿಸಿಕೊಳ್ಳುತ್ತಿದ್ದುದು ನನಗೆ ತಿಳಿಯುತ್ತಿದ್ದರೂ, ನನಗದು ಇಷ್ಟವಾಗುತ್ತಿರಲಿಲ್ಲ. ನನ್ನ ಮೊದಲ ದಿನದ ತರಗತಿಗೆ ನಾನು ಹೋದಾಗ ನಾನು ತುಂಬಾ ಉದ್ವಿಗ್ನನಾಗಿದ್ದೆ. ನನ್ನ ತಯಾರಿ ಸಾಕಷ್ಟು ಚೆನ್ನಾಗಿತ್ತು.

ನಾನೇನೇ ಕೆಲಸ ಮಾಡಲಿ ಲಕ್ಷ್ಯಗೊಟ್ಟು ಮಾಡಬೇಕೆಂದು ನನ್ನ ಅಪ್ಪ ನನಗೆ ಸದಾ ಹೇಳುತ್ತಿದ್ದರು. ವಿದ್ಯಾರ್ಥಿಗಳ ಪ್ರತಿಕ್ರಿಯೆ ತುಂಬಾ ಆಶಾದಾಯಕವಾಗಿತ್ತು. ಅವರೊಡನೆ ಒಂದು ಒಳ್ಳೆಯ ಸಂಬಂಧ ಏರ್ಪಟ್ಟಿತು. ನಾನು ಇರುವಷ್ಟು ಹೊತ್ತೂ, ಮೌನದಲ್ಲೇ ಇರುತ್ತಿದ್ದೆ ಮತ್ತು ಸ್ಟಾಫ್‌ರೂಮಿಗೆ ನಾನು ಹೋಗುವುದನ್ನೇ ಕಡಿಮೆ ಮಾಡತೊಡಗಿದೆ. ನಾನಿರುವಂತೆಯೇ ನನ್ನ ವಿದ್ಯಾರ್ಥಿಗಳು ನನ್ನನ್ನು ಒಪ್ಪಿಕೊಂಡಿದ್ದರು. ನನ್ನ ಸಹೋದ್ಯೋಗಿಗಳಾದರೋ ನಾನು ಯಾವ ಜಾತಿಯವನು ಎಂಬುದರ ಕಡೆಗೇ ಹೆಚ್ಚು ಆಸಕ್ತರಾಗಿದ್ದರು. ಅವರ ನಡವಳಿಕೆಯಿಂದ ನನಗೆ ನೋವಾಗುತ್ತಿದ್ದರೂ, ನನ್ನನ್ನು ಒಪ್ಪಿಕೊಂಡ ಮತ್ತು ಗೌರವಿಸುತ್ತಿದ್ದ ವಿದ್ಯಾರ್ಥಿಗಳನ್ನು ನೆನೆಸಿಕೊಂಡು ನಾನು ಸಂತೋಷಪಡುತ್ತಿದ್ದೆ.

(ಇದು 'ದಲಿತನಾಗಿರುವುದರ ಅನುಭವ...' ಎಂಬ ವಿಷಯವಾಗಿ ಸಿಆರ್‌ಎಸ್‌ಎಸ್‌ಇ ನಡೆಸಿದ ವ್ಯಕ್ತಿಗತ ಸಮೀಕ್ಷೆಯ ವರದಿಯಾಗಿದೆ).

ಸ್ಥಾನ ಮೀಸಲಾತಿಯನ್ನು ತೀವ್ರವಾಗಿ ವಿರೋಧಿಸುವವರೆಂದರೆ ಸಾಮಾನ್ಯ ವರ್ಗದವರು ಅಂದರೆ ಸುಧಾರಿತ ಪಂಗಡದವರು. ಹತ್ತಿರ ಪ್ರತಿ ಹತ್ತು ಜನ ಸುಧಾರಿತ ಪಂಗಡದವರಲ್ಲಿ ನಾಲ್ಕು ಜನ ಯಾವುದೇ ವರ್ಗಕ್ಕೆ ಮೀಸಲಾತಿಯನ್ನು ವಿರೋಧಿಸುವವರಾಗಿದ್ದಾರೆ. ಹಿಂದುಳಿದ ವರ್ಗದವರ ಪೈಕಿ, ಪ್ರತಿ ಹತ್ತರಲ್ಲಿ ಇಬ್ಬರು ಯಾವುದೇ ತೆರನಾದ ಸ್ಥಾನ ಮೀಸಲಾತಿಯನ್ನು ವಿರೋಧಿಸುವವರಾಗಿದ್ದಾರೆ. ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ಸೇರಿದ ಪ್ರತಿ ಹತ್ತು ಜನರ ಪೈಕಿ ಒಬ್ಬರು ಮಾತ್ರ ಯಾವುದೇ ತೆರನಾದ ಸ್ಥಾನ ಮೀಸಲಾತಿಯನ್ನು ವಿರೋಧಿಸುವವರಾಗಿದ್ದಾರೆ. ಇದೊಂದು ರೀತಿಯಲ್ಲಿ, 'ನಾನೆಲ್ಲಿ ಕುಳಿತಿದ್ದೇನೆಂಬುದರ ಮೇಲೆ ನಾನೆಲ್ಲಿ ನಿಂತುಕೊಳ್ಳುವೆನೆಂಬುದು ನಿರ್ಧಾರವಾಗುತ್ತದೆ' ಎಂಬ ಮಾತಿನ ಸಂಕೇತದಂತೆ ತೋರುತ್ತದೆ.

ಸುಧಾರಿತ ಪಂಗಡದವರಿಗೆ ಎಲ್ಲಿಯೂ ಸ್ಥಾನಗಳನ್ನು ಕಾದಿರಿಸಲು ಹಕ್ಕುಗಳನ್ನು ಕೊಡಲಾಗಿಲ್ಲ ಅಥವಾ ಆ ಸೌಲಭ್ಯದಿಂದ ಅವರು ವಂಚಿತರು ಎಂಬ ಅಂಶದ ಮೇಲೆಯೇ, ಅವರು ಆ ವ್ಯವಸ್ಥೆಯನ್ನು ವಿರೋಧಿಸುತ್ತಾರೆ ಎಂಬುದು ಮೇಲ್ನೋಟಕ್ಕೆ ತಿಳಿದುಬರುತ್ತದೆ. ಹಾಗಾಗಿಯೇ, ಈಗಿರುವ (ಪರಿಶಿಷ್ಟ ಜಾತಿ ಮತ್ತು ಪಂಗಡ ಮತ್ತು ಹಿಂದುಳಿದವರಿಗಾಗಿ) ಸ್ಥಾನ ಮೀಸಲಾತಿಯ ಕೋಟಾ ವ್ಯವಸ್ಥೆಯನ್ನು ಗಮನಿಸಿದರೆ, ಅದನ್ನು ಬೆಂಬಲಿಸಿದವರಲ್ಲಿ ಅರ್ಧದಷ್ಟು ಜನ ಪರಿಶಿಷ್ಟ ಜಾತಿಗೆ ಮತ್ತು ಹತ್ತಿರ ಹತ್ತು ಜನರ ಪೈಕಿ ನಾಲ್ವರು ಇತರ ಹಿಂದುಳಿದ ವರ್ಗಕ್ಕೆ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಮೂರನೇ ಒಂದು ಭಾಗದಷ್ಟು ಜನ ಹಾಗೂ ಉಳಿದವರ ಪೈಕಿ, ಕಾಲು ಭಾಗದಷ್ಟು ಜನರು ಮಾತ್ರವೇ ಇರುವುದು ಕಂಡು ಬರುತ್ತದೆ.




n-8197

ಸ್ಥಾನ ಮೀಸಲಾತಿಯ ವಿಷಯವಾಗಿ ಕಳೆದ ಕೆಲವರ್ಷಗಳಿಂದೀಚೆಗೆ ನಡೆದಿರುವ ತೀವ್ರಸ್ವರೂಪದ ಚರ್ಚೆಗಳನ್ನು ಗಮನಿಸಿದರೆ, ಯುವಜನಾಂಗ ತಮ್ಮ ದೈನಂದಿನ ಬದುಕನ್ನು ಎದುರಿಸಿದ ರೀತಿ ಮತ್ತು ಪರಿಣಾಮವಾಗಿ ಅವರ ಅಭಿಪ್ರಾಯಗಳು ವ್ಯಕ್ತವಾಗಿರುವುದು ಎದ್ದು ಕಾಣುತ್ತದೆ. ಕಳೆದ ಹಲವಾರು ದಶಕಗಳಿಂದ ಕರ್ನಾಟಕವೊಂದರಲ್ಲೇ, ಹಿಂದುಳಿದ ವರ್ಗದವರಿಗಾಗಿ ರೂಪಿತಗೊಂಡಿದ್ದ ಸ್ಥಾನ ಮೀಸಲಾತಿಯ ನಿಯಮಗಳನ್ನು ಗಮನಿಸಿದರೆ, ಅದರ ಪರವಾಗಿ ಇದ್ದು, ಅದನ್ನು ಸ್ವೀಕರಿಸುವವರ ಸಂಖ್ಯೆಯೇ ಹೆಚ್ಚಿನ ಪ್ರಮಾಣದಲ್ಲಿರುವುದು ನಿಚ್ಚಳವಾಗಿ ಕಾಣುತ್ತದೆ. ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವವರು ಸಾಮಾನ್ಯವಾಗಿ ಅವರ ಈ ರೀತಿಯ ಅನುಭವಗಳ ಆಧಾರದ ಮೇಲೆಯೇ, ಕೆಲವೊಮ್ಮೆ ವಿವಾದಾತ್ಮಕವೆನಿಸಬಹುದಾದ ನಿಲುವುಗಳನ್ನು ತಳೆದವರಾಗಿರುತ್ತಾರೆ. ಕರ್ನಾಟಕದ ಯುವಸಮುದಾಯದವರ ಅಭಿಪ್ರಾಯಗಳ ವಿಶ್ಲೇಷಣೆಗಳನ್ನು ಗಮನಿಸಿದರೆ ಈ ವಿಷಯವಾಗಿ ನಡೆಸಿದ ಸಮೀಕ್ಷೆಯ ಪರಿಣಾಮಗಳಲ್ಲಿ ಅವರ ನಿಲುವು ಸ್ಪಷ್ಟವಾಗಿ ಗೋಚರವಾಗುತ್ತದೆ.

## ಯುವ ಜನತೆ ಮತ್ತು ಅವರು ವಿರೋಧ ವ್ಯಕ್ತಪಡಿಸುವಿಕೆ

ಸಾಮುದಾಯಿಕವಾಗಿ ಕರ್ನಾಟಕದ ಯುವಜನಾಂಗ ವಿರೋಧ ವ್ಯಕ್ತಪಡಿಸುವ ಬಗ್ಗೆ ಪ್ರಶ್ನೆಗಳನ್ನು ಮುಂದಿಟ್ಟಾಗ ಅವರು ಪ್ರತಿಕ್ರಿಯಿಸಿದ ಬಗೆ ಹೇಗಿತ್ತು? ಎಲ್ಲವೂ ತಾವೆಣಿಸಿದಂತೆ ನಡೆಯುತ್ತಿಲ್ಲ ಎಂಬುದರ ಅರಿವಾದಾಗ, ಸಮುದಾಯವು ಏನಾದರೂ ಒಂದು ಕಾರ್ಯವನ್ನು ಕೈಗೊಳ್ಳಲೇಬೇಕು ಎಂಬ ಹಕ್ಕನ್ನು ನಂಬಿದರೇ? ಅಥವಾ ಯಾವ ಯಾವ ಮಾರ್ಗಗಳನ್ನು ಅವರು ಅನುಸರಿಸಿದರು ಮತ್ತು ಬೆಂಬಲಿಸಿದರು? ಮಹಾತ್ಮರು ಹಾಕಿಕೊಟ್ಟ ಅಹಿಂಸಾ ಮಾರ್ಗವೇ ಆದರ್ಶ ಮತ್ತು ಪ್ರಸ್ತುತ ಎಂಬ ಸಂದೇಶವನ್ನು ಇಂದಿಗೂ ರಾಜ್ಯದಲ್ಲಿ ಅನುಷ್ಠಾನಕ್ಕೆ ತರಲಾದೀತೇ? ಈ ಎಲ್ಲ ಅಂಶಗಳನ್ನು ಅರಿತುಕೊಳ್ಳಲು, ಮೂರು ಪ್ರಶ್ನೆಗಳನ್ನು ಯುವ ಸಮುದಾಯಕ್ಕೆ ಕೇಳಲಾಯಿತು:

ಅ) ಬಹುಸಂಖ್ಯಾತ ಅಭಿಪ್ರಾಯ ಮಂಡನೆಯ ನಡುವೆ, ತಮಗೆ ಸರಿಯೆನಿಸಿದ ಆದರೆ ಭಿನ್ನವಾದ ತಮ್ಮ ಅನಿಸಿಕೆಯನ್ನು ವ್ಯಕ್ತಪಡಿಸುವ ಹಕ್ಕನ್ನು ಅವರು ಬಳಸಿಕೊಳ್ಳಲು ಸಾಧ್ಯವಿದೆಯೇ?

ಆ) ತಮ್ಮ ನಿಲುವೇನಾದರೂ ಜನಸಮುದಾಯದ ಆದೇಶಕ್ಕೆ ವಿರುದ್ಧವಾಗಿದ್ದರೆ, ಪ್ರತಿಭಟನಾಕಾರರು ಯಾವುದೇ ಬಗೆಯ ಆಂದೋಲನವನ್ನಾಗಲಿ, ಚಳುವಳಿಯನ್ನಾಗಲಿ ಕೈಗೊಳ್ಳಬಾರದು;

ಇ) ಬಿಕ್ಕಟ್ಟು ಎಂಬುದು ಎಲ್ಲ ತೆರನಾದ ಸಮಾಜದಲ್ಲಿ ಇದ್ದದ್ದೇ ಮತ್ತು ಅದನ್ನು ಹಿಂಸೆಯ ಮೂಲಕವೇ ಬಗೆಹರಿಸಿಕೊಳ್ಳಲು ಸಾಧ್ಯ;

ಹತ್ತಿರಕ್ಕೆ ಅರ್ಧದಷ್ಟು ಜನರು 'ಪ್ರತಿಯೊಬ್ಬರೂ ತಮ್ಮ ಅಭಿವ್ಯಕ್ತಿ ಸ್ವಾತಂತ್ರ್ಯದ ಹಕ್ಕನ್ನು ಚಲಾಯಿಸುವ ಹಕ್ಕು ಹೊಂದಿರಲೇ ಬೇಕು' ಎಂಬುದನ್ನು ಬಲವಾಗಿ ಅನುಮೋದಿಸುವವರಾಗಿದ್ದರು. ಪ್ರತಿ ಹತ್ತು ಜನರ ಪೈಕಿ ಒಬ್ಬರು ಮಾತ್ರವೇ ಈ ಅನಿಸಿಕೆಗೆ ವಿರೋಧ ವ್ಯಕ್ತಪಡಿಸಿದ್ದರು. ಬೆಂಗಳೂರಿನ ಯುವಸಮುದಾಯದ ಪ್ರತಿ ಹತ್ತು ಜನರಲ್ಲಿ, ಸನಿಹಕ್ಕೆ ಒಂಭತ್ತು ಜನ ಈ ನಿಲುವನ್ನು ಬಲವಾಗಿ ಅನುಮೋದಿಸಿದ್ದಾರೆ. ಅದರಲ್ಲೂ ಸಶಕ್ತ ಸಾಮಾಜಿಕ ಮತ್ತು ಅವಕಾಶವಂಚಿತ ವರ್ಗಕ್ಕೆ ಸೇರಿದ್ದ ಯುವಜನತೆಯೇ ಈ ನಿಲುವನ್ನು ಬಲವಾಗಿ ಎತ್ತಿ ಹಿಡಿದಿದ್ದು ಸ್ಪಷ್ಟವಾಗಿತ್ತು.




| | [illegible] | [illegible] | [illegible] | [illegible] |
|---|---|---|---|---|
| [illegible] | 47 | 40 | 11 | 2 |
| [illegible] | 14 | 25 | 36 | 25 |
| [illegible] | 9 | 18 | 29 | 44 |

n - 8171

ಚಳುವಳಿಗಳು ಮತ್ತು ಪ್ರಾತ್ಯಕ್ಷಿಕೆಗಳು ಸಾರ್ವಜನಿಕ ಜನಜೀವನವನ್ನು ಗಲಭೆಗೊಳಿಸುವ ಸಂದರ್ಭಗಳಿದ್ದಾಗಲೂ ಅವುಗಳಿಗೆ ಒಪ್ಪಿಗೆ ಕೊಡುವುದನ್ನು ಪ್ರತಿ ಹತ್ತು ಜನರ ಪೈಕಿ ಆರು ಜನರು ಬೆಂಬಲಿಸಿದ್ದಾರೆ. ಈ ಹೇಳಿಕೆಯನ್ನು ಅಂಗೀಕರಿಸುವ

ಅಥವಾ ನಿರಾಕರಿಸುವ ವಿಚಾರ ಬಂದಾಗ, ಯುವಸಮುದಾಯದಲ್ಲಿ ಎರಡು ಪಂಗಡಗಳು ಏರ್ಪಟ್ಟಿದ್ದವು. ಸಾರ್ವಜನಿಕ ಜನಜೀವನವನ್ನು ಗಲಭೆಗೊಳಿಸುವ ಸಂದರ್ಭಗಳಿದ್ದಾಗಲೂ ಚಳುವಳಿಗಳು ಮತ್ತು ಆಂದೋಲನಗಳಿಂದ ಹಿಂದೆಗೆಯುವುದಕ್ಕೆ ನಿರಾಕರಿಸಿದವರ ಪೈಕಿ, ಗ್ರಾಮಾಂತರ ಪ್ರದೇಶಗಳ, ಸಣ್ಣ ಸಣ್ಣ ಪಟ್ಟಣಗಳ, ಕೆಳ ಮತ್ತು ತೀರಾ ಕೆಳವರ್ಗಕ್ಕೆ ಸೇರಿದ್ದ ಜನತೆ ಹಾಗೂ ದಲಿತ, ಪರಿಶಿಷ್ಟ ವರ್ಗಕ್ಕೆ ಸೇರಿದ್ದ ಜನತೆ – ಇವರೆಲ್ಲ ಸೇರಿದ್ದರು.

ಇನ್ನೊಂದೆಡೆ, ಬೆಂಗಳೂರು ನಗರ ಮತ್ತು ಇತರ ನಗರಗಳಲ್ಲಿ, ಸಾರ್ವಜನಿಕ ಜನಜೀವನವನ್ನು ಗಲಭೆಗೊಳಿಸುವ ಸಂದರ್ಭಗಳಿದ್ದಾಗಲೂ ಚಳುವಳಿಗಳಿಗೆ ಮತ್ತು ಆಂದೋಲನಗಳಿಗೆ ಒಪ್ಪಿಗೆ ಕೊಡುವುದನ್ನು ವಿರೋಧಿಸಿ ಮತ್ತು ಅವುಗಳಿಂದ ಹಿಂದೆ ಸರಿಯುವುದನ್ನು ಬೆಂಬಲಿಸಿದವರ ಪೈಕಿ ಯುವಸಮುದಾಯದವರು, ಸುಧಾರಿತ ಜಾತಿ ಮತ್ತು ಹಿಂದುಳಿದ ಜಾತಿಯವರು ಹಾಗೂ ಮಧ್ಯಮ ಮತ್ತು ಮೇಲ್ಮಧ್ಯಮ ವರ್ಗದ ಜನರು ಸೇರಿದ್ದರು. ಇದರಿಂದ, ಸೌಲಭ್ಯ ವಂಚಿತ ಸಮುದಾಯಗಳು ಮಾತ್ರವೇ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಲು ಇರುವ ಏಕೈಕ ಮತ್ತು ಬಲಶಾಲೀ ಮಾರ್ಗಗಳೆಂದರೆ ಚಳುವಳಿಗಳು ಮತ್ತು ಹರತಾಳಗಳು ಎಂದು ನಂಬಿದ್ದಾಗಿ ಸ್ಪಷ್ಟವಾಗಿ ತಿಳಿದುಬರುತ್ತದೆ.

ವರದಿಯ ಈ ವಿಭಾಗದಲ್ಲಿ, ಕರ್ನಾಟಕದ ಯುವಸಮುದಾಯವು ವಿವಿಧ ರಾಜಕೀಯ, ಆಡಳಿತಾತ್ಮಕ ಮತ್ತು ಅಭಿವೃದ್ಧಿಗಳ ವಿಷಯವಾಗಿ ಹೇಗೆ ಸ್ಪಂದಿಸಿದರೆಂಬುದನ್ನು ವಿವರಿಸಲಾಗಿದೆ. ಅವರ ಸುತ್ತಲಿನ ಸಾಮಾಜಿಕ ಮತ್ತು ರಾಜಕೀಯ ಚಿತ್ರಣಗಳ ಬಗ್ಗೆ ಅವರ ನಿಲುವು ಏನೆಂಬುದು ಅವರೇ ವ್ಯಕ್ತಪಡಿಸಿರುವ ಅಭಿಪ್ರಾಯಗಳಲ್ಲಿ, ಅನಿಸಿಕೆಗಳಲ್ಲಿ ಮತ್ತು ಪ್ರತಿಕ್ರಿಯೆಗಳಲ್ಲಿ ಸ್ಪಷ್ಟವಾಗಿ ಕಾಣಿಸುತ್ತದೆ.



## ಕರ್ನಾಟಕದ ಹೆಚ್ಚಿನ ಯುವಜನತೆ ಸರಕಾರೀ ಉದ್ಯೋಗಗಳಲ್ಲಿ ಆಸಕ್ತರಾಗಿದ್ದಾರೆ.

ಉದ್ಯೋಗಾವಕಾಶಗಳ ಬಗ್ಗೆ ಕರ್ನಾಟಕದ ಯುವಸಮುದಾಯಕ್ಕೆ ಇರುವ ದೃಷ್ಟಿಕೋನ ಎಂಥದ್ದು ಮತ್ತು ಅವರ ಅಪೇಕ್ಷೆ ಮತ್ತು ನಿರೀಕ್ಷೆಗಳೇನು ಎಂಬುದರ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ. ಈ ರೀತಿಯ ಬಹುಮುಖ್ಯವಾದೊಂದು ವಿಷಯವನ್ನು ಕುರಿತಾದ ಪ್ರಶ್ನಾವಳಿಯನ್ನು ಅವರ ಮುಂದಿಟ್ಟು ಅವರ ಅಭಿಪ್ರಾಯಗಳನ್ನು ಸಂಗ್ರಹಿಸಲಾಯಿತು.

ಉದಾರೀಕರಣ, ಖಾಸಗೀಕರಣದ ಮತ್ತು ಜಾಗತೀಕರಣದ ಇಂಥ ಕಾಲಮಾನದಲ್ಲಿ, ಯುವಸಮುದಾಯವು ಇವತ್ತಿಗೂ ಸರಕಾರೀ ನೌಕರಿ ವ್ಯವಸ್ಥೆಯನ್ನೇ ಕನಸಾಗಿಟ್ಟುಕೊಂಡಿದೆಯೇ? ಪ್ರತಿ ಹತ್ತರಲ್ಲಿ ಆರು ಮಂದಿ ಸರಕಾರೀ ಕೆಲಸವನ್ನೇ ಬಯಸುವವರಾಗಿದ್ದರೆ, ಮಿಕ್ಕ ಕಾಲು ಪ್ರತಿಶತ ಮಂದಿ ಖಾಸಗಿ ಉದ್ಯಮಗಳಲ್ಲೂ ಕೆಲಸಮಾಡುವುದಕ್ಕೆ ತಯಾರಿರುವವರಾಗಿದ್ದಾರೆ.

### ಒಂದು ಉದ್ಯೋಗದಲ್ಲಿ ನೀವು ಏನನ್ನು ನಿರೀಕ್ಷಿಸುತ್ತೀರಿ?

ಇವತ್ತಿನ ಯುವಸಮುದಾಯವೇ ನಾಳಿನ ಔದ್ಯೋಗಿಕ ಶಕ್ತಿಯ ಬಹುಮುಖ್ಯ ಕೇಂದ್ರಬಿಂದು ಎನ್ನಬಹುದು. ತಮ್ಮ 20ರ ಅಥವಾ 30ರ ಹರೆಯದಲ್ಲಿರುವ ಇವತ್ತಿನ ಬಹುತೇಕ ಯುವಜನಾಂಗದವರು ಈಗಾಗಲೇ ತಮ್ಮ ಆಯ್ಕೆಯ ಉದ್ಯೋಗವೊಂದರಲ್ಲಿ ತೊಡಗಿಕೊಂಡಿರಬಹುದು ಮತ್ತು ಹದಿಹರೆಯದಲ್ಲಿರುವ ಎಳೆಯರು ಅಥವಾ ಇದೀಗ ತಮ್ಮ ಪದವಿಪೂರ್ವ ಶಿಕ್ಷಣವನ್ನು ಪಡೆದುಕೊಳ್ಳುವ ಉಮೇದಿಯಲ್ಲಿರುವವರು ಮುಂದೆ ಭವಿಷ್ಯದಲ್ಲಿ ತಾವು ಮಾಡಬಹುದಾದ ಉದ್ಯೋಗವೆಂಥದ್ದಿರಬೇಕು ಎಂಬುದರ ಬಗ್ಗೆ ಆಲೋಚಿಸಿದ್ದಿರಬಹುದು.




n - 8509



**ಪ್ರದೇಶವಾರು ಉದ್ಯೋಗದ ಆದ್ಯತೆ**




| | ಗ್ರಾಮ | ಪಟ್ಟಣ | ನಗರ | ಮೆಟ್ರೋಪಾಲಿಟನ್ |
|---|---|---|---|---|
| ಸರಕಾರಿ ಉದ್ಯೋಗ ಬಯಸುತ್ತಾರೆ | 59 | 56 | 47 | 78 |
| ಖಾಸಗಿ ಕ್ಷೇತ್ರ ಉದ್ಯೋಗ ಬಯಸುತ್ತಾರೆ | 22 | 25 | 33 | 11 |

n - 8509

ಸರಕಾರೀ ನೌಕರಿಯ ಆಕರ್ಷಣೆ ಕೇವಲ ಹಳ್ಳಿಗಳಲ್ಲಿ ಮತ್ತು ಸಣ್ಣಸಣ್ಣ ಪಟ್ಟಣಗಳಲ್ಲಿ ಮಾತ್ರವೇ ಇರುತ್ತದೆ ಎಂಬ ನಂಬಿಕೆಯೇ ಇದೆ. ಆದರೆ, ಸಮೀಕ್ಷೆಯ ವರದಿಗಳು ಕೊಡುವುದು ಬೇರೆಯದೇ ಚಿತ್ರಣವನ್ನು. ಬೆಂಗಳೂರಿನಲ್ಲಿ ನಡೆಸಿದ ಸಮೀಕ್ಷೆಯ ಪ್ರಕಾರ, ಪ್ರತಿ ಹತ್ತು ಜನರಲ್ಲಿ ಹತ್ತಿರ ಎಂಟು ಜನ ಸರಕಾರೀ ನೌಕರಿಯನ್ನೇ ಬಯಸುವವರಾಗಿದ್ದಾರೆ. ಅದೇ ರೀತಿಯಾಗಿ, ಹಳ್ಳಿಗಳಲ್ಲಿ ನಡೆಸಿದ ಸಮೀಕ್ಷೆಯ ಪ್ರಕಾರ, ಪ್ರತಿ ಹತ್ತು ಜನರಲ್ಲಿ ಹತ್ತಿರ ಆರು ಜನ ಸರಕಾರೀ ನೌಕರಿಯನ್ನೇ ಇಷ್ಟಪಡುವವರಾಗಿದ್ದಾರೆ. ಬೆಂಗಳೂರಿನಲ್ಲಿ ಮತ್ತು ಹಳ್ಳಿಗಳಲ್ಲಿ ಇದ್ದುದಕ್ಕಿಂತ ಪಟ್ಟಣ ಪ್ರದೇಶಗಳಲ್ಲಿ ಮತ್ತು ಸಣ್ಣ ಸಣ್ಣ ನಗರಗಳಲ್ಲಿ ಈ ಸರಕಾರೀ ನೌಕರಿಯ ಆಕರ್ಷಣೆಯು ಕಮ್ಮಿಯೇ ಇತ್ತೆನ್ನಬಹುದು. ಇಲ್ಲಿಯೂ ಕೂಡಾ, ಯುವಸಮುದಾಯದವರ ಪೈಕಿ, ತಾವಿನ್ನೂ ಚಿಕ್ಕವರೆಂಬ ಭಾವನೆಯಿಂದ ಬೆಂಗಳೂರಿನಲ್ಲಿ ಮತ್ತು ಹಳ್ಳಿಗಳಲ್ಲಿ ಇದ್ದುದಕ್ಕಿಂತ ಪಟ್ಟಣ ಪ್ರದೇಶಗಳಲ್ಲಿ ಮತ್ತು ಸಣ್ಣ ಸಣ್ಣ ನಗರಗಳಲ್ಲಿಯೇ ಅವರು ಖಾಸಗಿ ಕೆಲಸವನ್ನು ಆಯ್ಕೆ ಮಾಡಿಕೊಳ್ಳುವ ಕಡೆಗೆ ಒಲವು ತೋರಲು ಕಾರಣವಾಗಿತ್ತು. ಬೆಂಗಳೂರಿನ ಪ್ರತಿ ಹತ್ತು ಜನರ ಪೈಕಿ ಕೇವಲ ಒಬ್ಬರು ಮತ್ತು ಗ್ರಾಮೀಣ ಕರ್ನಾಟಕದ ಕಡೆಗೆ ಪ್ರತಿ ಹತ್ತರಲ್ಲಿ ಇಬ್ಬರು ಮಾತ್ರವೇ ಖಾಸಗಿ ಉದ್ಯೋಗದ ಕಡೆ ಆಸಕ್ತರಾಗಿದ್ದುದು ಕಂಡುಬಂದಿದೆ. ರಾಜ್ಯದ ಇತರ ಹಲವಾರು ನಗರಗಳಲ್ಲಿ, ಹತ್ತಿರ ಸಮೀಕ್ಷೆಗೊಳಪಟ್ಟ ಯುವಸಮುದಾಯದ ಮೂರನೇ ಒಂದು ಭಾಗದಷ್ಟು ಜನ ಖಾಸಗಿ ಉದ್ಯೋಗವನ್ನು ಮತ್ತು ಪಟ್ಟಣಗಳಲ್ಲಿ, ಸಮೀಕ್ಷೆಗೊಳಪಟ್ಟ ಸುಮಾರು ಕಾಲು ಭಾಗದಷ್ಟು ಜನರು ಮಾತ್ರವೇ ಖಾಸಗಿ ಉದ್ಯೋಗದೆಡೆಗೆ ಆಸಕ್ತರಾಗಿದ್ದುದು ಕಂಡುಬಂತು. ತಮ್ಮದೇ ಸ್ವಂತ ಉದ್ಯೋಗ ಮಾಡಬೇಕೆಂದು ಅಂದುಕೊಂಡಿದ್ದವರ ನಡುವೆ ಕೂಡ ಅಂಥ ವ್ಯತ್ಯಾಸವೇನೂ ಕಂಡುಬರಲಿಲ್ಲ.

ಇನ್ನು ಇವರೆಲ್ಲರ ತಾಯಂದಿರ ಶಿಕ್ಷಣವನ್ನೂ ಗಮನಕ್ಕೆ ತೆಗೆದುಕೊಂಡಾಗ, ಮನೆಯಲ್ಲಿ ಯಾರ ತಾಯಂದಿರು ಕನಿಷ್ಠ ಹತ್ತನೇ ತರಗತಿಯನ್ನು ಮುಗಿಸಿಕೊಂಡಿದ್ದರೋ, ಅವರ ಮಕ್ಕಳುಗಳು ಖಾಸಗಿ ಉದ್ಯೋಗಕ್ಕೇ ಹೆಚ್ಚಿನ ಮಹತ್ವ ಕೊಟ್ಟದ್ದನ್ನು ಗಮನಿಸಲಾಯಿತು. ಒಂದು ವೇಳೆ ಇಬ್ಬರೂ ಪಾಲಕರು ಪದವೀಧರರಾಗಿದ್ದ ಸಂದರ್ಭಗಳಲ್ಲಿ, ಖಾಸಗಿ ವಲಯದಲ್ಲಿ ಸಿಗಬಹುದಾದ ಉದ್ಯೋಗಗಳ ಕಡೆಗೆ ಹೆಚ್ಚಿನ ಒಲವು ಮತ್ತು ಸರಕಾರೀ ಉದ್ಯೋಗದಲ್ಲಿ ನಿರಾಸಕ್ತಿ ಹೊಂದಿದ್ದುದೂ ಕಂಡುಬಂತು.

ಹೀಗೆ ಗಮನಿಸಿ, ಒಟ್ಟಿಗೇ ವಿಶ್ಲೇಷಿಸಬಹುದಾಗಿರುವ ಎರಡೂ ಅಂಶಗಳು ಇಲ್ಲಿ ಸ್ಪಷ್ಟವಾಗಿ ಎದ್ದು ತೋರುತ್ತವೆ. ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು ಹೆಚ್ಚಿದ್ದಷ್ಟೂ, ಯುವಸಮುದಾಯದವರು ಸರಕಾರೀ ಕೆಲಸಗಳಲ್ಲಿ ಅನಾಸಕ್ತರಾಗಿಯೂ, ಖಾಸಗಿ ಉದ್ಯೋಗಗಳಲ್ಲೇ ಹೆಚ್ಚು ಆಸಕ್ತಿ ಹೊಂದಿದ್ದುದಾಗಿಯೂ ಕಂಡುಬಂತು. ತಂದೆಯ ಶೈಕ್ಷಣಿಕ ಸಾಧನೆಗಳು ಕೂಡ ಅವರುಗಳು ಖಾಸಗಿ ಉದ್ಯೋಗಗಳತ್ತಲೇ ಆಸಕ್ತಿ ತೋರುವುದಕ್ಕೆ ಇದ್ದ ಒಂದು ಕಾರಣವಾದರೆ, ಪದವೀಧರೆ ತಾಯಂದಿರ ಮಕ್ಕಳು ಕೂಡಾ ಖಾಸಗಿ ಉದ್ಯೋಗಳತ್ತಲೇ ಮುಖ ಮಾಡಿದ್ದು ಸ್ಪಷ್ಟವಾಗಿ ಗೋಚರವಾಗುತ್ತಿತ್ತು.

**ಆಯಾಯ ಕ್ಷೇತ್ರದಲ್ಲಿ ತಂತಮ್ಮ ಜನಸಮುದಾಯದ ಬಗ್ಗೆ ಕಳಕಳಿಯನ್ನು ವ್ಯಕ್ತಪಡಿಸುವ ಸಂದರ್ಭಗಳಲ್ಲಿ, ಯುವಸಮುದಾಯವು ತಮ್ಮ ಕ್ಷೇತ್ರಗಳ ಹಿರಿಮೆಯನ್ನು ಎತ್ತಿಹಿಡಿದಿದ್ದರು. ತಮ್ಮ ಕ್ಷೇತ್ರಗಳಿಗೆ ನಿಜಕ್ಕೂ ಬೇಕಾಗಿರುವುದು ಏನು ಎಂಬುದುದನ್ನು ವಿವರಿಸುವಾಗ ಅದಕ್ಕೆ ಸಂಬಂಧಿಸಿದ ಪ್ರತಿ ಕಟುವಸ್ತುವನ್ನು ಅರ್ಥಮಾಡಿಕೊಂಡಿರುವ ಅವರ ದಿಟ್ಟತನ ಅವರ ಒಂದೊಂದು ಹೇಳಿಕೆಯಲ್ಲೂ ಸ್ಪಷ್ಟವಾಗಿ ವ್ಯಕ್ತವಾಗುತಿತ್ತು. ತುಂಬಾ ಸಾಮಾನ್ಯ ಬೇಡಿಕೆಗಳಾದ, ಸಮರ್ಪಕ ವಿದ್ಯುತ್ ಪೂರೈಕೆ, ಕುಡಿಯುವ ನೀರಿನ ಸೌಲಭ್ಯ ಮತ್ತು ಸಂಚಾರಯೋಗ್ಯ ರಸ್ತೆಗಳು – ಈ ರೀತಿಯ ಬಹುಮುಖ್ಯ ಮತ್ತು ಅತ್ಯಗತ್ಯ ಬೇಡಿಕೆಗಳನ್ನು ಅವರ ಮುಂದಿಟ್ಟಿದ್ದರು.**

ಮೂರನೇ ಎರಡರಷ್ಟು ಜನ ಯುವಸಮುದಾಯ ತಾವು ಕನ್ನಡಿಗರೆಂದು ಹೇಳಿಕೊಳ್ಳಲು ಹೆಮ್ಮೆಯಾಗುತ್ತದೆ ಎಂದದ್ದು ನಿಜಕ್ಕೂ ಹೃದಯಸ್ಪರ್ಶಿಯಾಗಿತ್ತು. ಮಿಕ್ಕ ಪ್ರತಿ ಹತ್ತರಲ್ಲಿ, ಮೂವರು ತಾವೂ ಕೂಡಾ ಕನ್ನಡಿಗರಾಗಿರುವುದಕ್ಕೆ ಅಪಾರ ಹೆಮ್ಮೆ ಇದೆ ಎಂದಿದ್ದರು. ಶೇಕಡಾ 94ಕ್ಕೂ ಹೆಚ್ಚು ಜನ ಯುವಸಮುದಾಯದವರು ತಾವು ಕನ್ನಡಿಗರೆಂಬ ಅಭಿಮಾನವಿದೆ ಎಂದು ಹೇಳಿಕೊಂಡಿದ್ದಾರೆ. ಇನ್ನು ಕೆಲವರ ಪೈಕಿ ಹೆಚ್ಚಿನವರು ಪರರಾಜ್ಯಗಳಿಂದ ಬಂದು ಕರ್ನಾಟಕದಲ್ಲಿ ನೆಲೆಸಿದ್ದರೂ, ತಮ್ಮ ಮಾತೃಭಾಷೆ ಕನ್ನಡವಲ್ಲದಿದ್ದರೂ, ತಾವೂ ಕೂಡ ಕನ್ನಡಿಗರಾಗಿಯೇ ಇರುವುದಕ್ಕೆ ಅಭಿಮಾನ ಪಡುತ್ತೇವೆ ಎಂದು ತಿಳಿಸಿದ ಅಂಶವನ್ನಿಲ್ಲಿ ಒತ್ತಿ ಹೇಳಲೇಬೇಕಾಗಿದೆ. ಇಂತಹ ಭಾವನಾತ್ಮಕ ವಿಷಯದಲ್ಲಿ ಕರ್ನಾಟಕ ರಾಜ್ಯದ ಯುವಸಮುದಾಯಕ್ಕಿರುವ ಒಗ್ಗಟ್ಟಿನ ಭಾವನೆ ತಾಯ್ನಾಡಿನ ಕುರಿತು ಅವರಿಗಿರುವ ವಿಶೇಷ, ಧನಾತ್ಮಕ ಅಭಿಮಾನಕ್ಕೆ ಹಿಡಿದ ಕನ್ನಡಿಯಾಗಿದೆ.




## ರಾಜ್ಯದ ಜನತೆ ಎದುರಿಸುತ್ತಿರುವ ಪ್ರಮುಖ ಸಮಸ್ಯೆಗಳು

ತಮ್ಮ ರಾಜ್ಯದ ಜನತೆ ಬಹುಮುಖ್ಯವಾಗಿ ಎದುರಿಸುತ್ತಿರುವ ಸಮಸ್ಯೆ/ಸಂಕಷ್ಟಗಳು ಯಾವುವು ಎಂಬ ಬಗ್ಗೆ ನಮ್ಮ ಯುವಪೀಳಿಗೆಯನ್ನು ಮುಕ್ತವಾಗಿ ಪ್ರಶ್ನಿಸಿದಾಗ ಅವರಿಂದ ಪಡೆದುಕೊಂಡ ಉತ್ತರಗಳನ್ನು ಯಥಾವತ್ತಾಗಿ ನಮೂದಿಸಿಕೊಂಡು, ನಂತರ ಅವುಗಳನ್ನು ಇಲ್ಲಿ ಸ್ಪಷ್ಟವಾಗಿ ಹಾಗೂ ಸಮರ್ಪಕವಾಗಿ ಪಟ್ಟಿಮಾಡಲಾಗಿದೆ.






n-8310

ಈ ಪ್ರಶ್ನೆಯನ್ನು ಕೇಳಿದಾಗ, ಅವರು ಮುಖ್ಯವಾಗಿ ಎರಡು ಅಂಶಗಳನ್ನು ಪ್ರಸ್ತಾಪಿಸಿದರು. ಒಂದು ಸೀಮಿತ ಉದ್ಯೋಗಾವಕಾಶಗಳು, ಇನ್ನೊಂದು ಸರಕಾರದಲ್ಲಿನ ಭ್ರಷ್ಟಾಚಾರ. ಪ್ರತಿಕ್ರಿಯಿಸಿದ ಆರನೇ ಒಂದು ಭಾಗದಷ್ಟು ಜನರ ಸವಾಲು ಅಥವಾ ಸಮಸ್ಯೆ ಇದೇ ಆಗಿದ್ದಿತು. ಇನ್ನುಳಿದಂತೆ, ಮೂರನೇ ಒಂದರಷ್ಟು ಜನ ಕೂಡ ಇದೇ ಎರಡು ಸಮಸ್ಯೆಗಳನ್ನು ಪಟ್ಟಿ ಮಾಡಿದ್ದರು. ಇವರೆಲ್ಲ ತಮ್ಮ ಭವಿಷ್ಯದ ಉದ್ಯೋಗಾವಕಾಶಗಳ ಬಗ್ಗೆ ಮತ್ತು ತಾವೆಲ್ಲ ಅಭಿವೃದ್ಧಿ ಹೊಂದುವುದರ ಕಡೆಗೆ ಹೆಚ್ಚು ಚಿಂತಿತರಾಗಿರುವಂತೆಯೂ ಮತ್ತು ನಿರುದ್ಯೋಗ ಸಮಸ್ಯೆಯೊಂದು ಸವಾಲಾಗಿಯೂ ಇರುವಂತೆ ಕಂಡುಬರುತ್ತಿದ್ದುದರಿಂದಲೇ ಉದ್ಯೋಗಕ್ಕೆ ಅವರು ಕೊಡುತ್ತಿದ್ದ ಮಹತ್ವದ ಅರಿವಾಗುತ್ತದೆ. ಸರಕಾರದ ನಿರಂತರ ಭ್ರಷ್ಟಾಚಾರದ ಪ್ರಸ್ತಾಪ ಪದೇ ಪದೇ ಆಗುತ್ತಿರುವುದಕ್ಕೆ ಇರುವ ಕಾರಣವೆಂದರೆ, ಅಧಿಕಾರಕ್ಕಾಗಿ ಯುವಪೀಳಿಗೆಗಿರುವ ದುರಾಸೆ ಮತ್ತು ಅದರ ದುರ್ಬಳಕೆ. ನಿರಂತರ ನಿರುದ್ಯೋಗ ಸಮಸ್ಯೆ ಮತ್ತು ಹೆಚ್ಚುತ್ತಿರುವ ಭ್ರಷ್ಟಾಚಾರಗಳು ಅವರ ನಿರೀಕ್ಷೆಗಳನ್ನು ಹುಸಿಯಾಗಿಸಿವೆ ಅಷ್ಟೇ ಅಲ್ಲ, ಸರಕಾರೀ ಆಡಳಿತ ವ್ಯವಸ್ಥೆಯೊಂದರಿಂದ ಅವರು ನಿಜಕ್ಕೂ ನಿರೀಕ್ಷಿಸುವುದು ಏನನ್ನು ಎಂಬುದಕ್ಕೆ ಹಿಡಿದ ಕನ್ನಡಿಯಾಗಿವೆ.

ಗ್ರಾಮಾಂತರ ಪ್ರದೇಶಗಳಲ್ಲಿ ಹೆಚ್ಚಿನ ಜನ ರಾಜ್ಯದ ಸರಕಾರದ ಭ್ರಷ್ಟಾಚಾರವೇ ಒಂದು ಬಹುದೊಡ್ಡ ಪಿಡುಗು, ಸಂಕೀರ್ಣ ಸಮಸ್ಯೆ ಎಂಬ ಅಭಿಪ್ರಾಯವನ್ನು ಒತ್ತಿ ಹೇಳಿದರು. (ಬೆಂಗಳೂರನ್ನು ಹೊರತುಪಡಿಸಿ) ಇತರ ಪಟ್ಟಣಗಳು ಮತ್ತು ನಗರಗಳಲ್ಲಿ, ನಿರುದ್ಯೋಗ ಸಮಸ್ಯೆಯೇ ಅತಿ ದೊಡ್ಡ ಸಮಸ್ಯೆ ಎಂಬುದಾಗಿ ಅಭಿಪ್ರಾಯಗಳು ವ್ಯಕ್ತವಾದವು. ಬೆಂಗಳೂರಿನಂತಹ ನಗರಗಳಲ್ಲಿ ವ್ಯಕ್ತವಾದ ಅಭಿಪ್ರಾಯಗಳ ಪ್ರಕಾರ, ಬಡತನವು ಒಂದು ಸವಾಲಾಗಿಯೂ, ಅತಿದೊಡ್ಡ ಸಮಸ್ಯೆಯಾಗಿಯೂ ಕಂಡು ಬಂತು.




n-8310

ರಾಜ್ಯದ ಜನತೆ ಎದುರಿಸುತ್ತಿರುವ ಅತಿದೊಡ್ಡ ಸಮಸ್ಯೆ ಯಾವುದು ಎಂದು ಕೇಳಲಾದ ಪ್ರಶ್ನೆಗೆ ಕರ್ನಾಟಕದ ಯುವಸಮುದಾಯ ತಮ್ಮ ಹತ್ತಿರದ ಸುತ್ತಮುತ್ತಲಿನ ಪರಿಸರವನ್ನು ಮತ್ತು ಅವರದೇ ಬದುಕಿನ ನಿಜಾನುಭವಗಳನ್ನು ಆಧರಿಸಿ ಅವರ ಮನಸ್ಸಿನಲ್ಲಿದ್ದ ಉತ್ತರಗಳನ್ನು ನೀಡಿದರು. ಸರಕಾರದೊಡನೆ ನೇರ ಮುಖಾಮುಖಿಯಾಗುವ ಸಂದರ್ಭಗಳಿದ್ದರೆ ಅವರು ಪಟ್ಟಿ ಮಾಡಬಹುದಾದ ಸಮಸ್ಯೆಗಳ ಬಗ್ಗೆ ಕೇಳಿದಾಗ ಅವರಿಂದ ಒಕ್ಕೊರಲಿನಲ್ಲಿ ಬಂದ ಉತ್ತರವೆಂದರೆ, ಸರಕಾರಕ್ಕೆ ಅಂಟಿಕೊಂಡಿರುವ ಭ್ರಷ್ಟಾಚಾರ ಎನ್ನುವ ಮಹಾಪಿಡುಗು. ಸೂಕ್ತ ಉತ್ತೇಜನ ಮತ್ತು ಅವಕಾಶಗಳನ್ನು ಒದಗಿಸಿದರೆ, ತಮ್ಮೆಲ್ಲ ಪ್ರತಿಭೆ ಮತ್ತು ಶಕ್ತಿಯನ್ನು ಒರೆಗೆ ಹಚ್ಚಲು ಸೂಕ್ತ ವೇದಿಕೆ ಸಿಕ್ಕಿದ್ದೇ ಆದಲ್ಲಿ, ನಿರುದ್ಯೋಗ ಸಮಸ್ಯೆ ಇರದಂತೆ ಮಾಡುವುದಾಗಿ, ಅಚ್ಚರಿ ಮತ್ತು ಆಸಕ್ತಿಯಿಂದಲೇ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದರು ಇನ್ನು ಕೆಲವರು. ಬಡತವನ್ನು ನೇರವಾಗಿ ಅನುಭವಿಸಿಯೋ ಅಥವಾ ತಮ್ಮ ನೆರೆಹೊರೆಯವರಲ್ಲಿ ಅದರ ಬಿಸಿಯನ್ನು ಕಂಡು ಕೇಳಿದ ಅನುಭವವಿದ್ದ ಮತ್ತೂ ಕೆಲವರು, ಸಧ್ಯಕ್ಕಿರುವ ಅತಿ ದೊಡ್ಡ ಸಮಸ್ಯೆ ಮತ್ತು ಸವಾಲೆಂದರೆ ಬಡತನವೇ ಎಂಬ ಮಾತನ್ನೂ ತಿಳಿಸಿದರು. ಒಟ್ಟಾರೆಯಾಗಿ, ಪ್ರಸ್ತುತ ಕಾಲಮಾನದಲ್ಲಿ ನಮ್ಮ ರಾಜ್ಯವು ಎದುರಿಸುತ್ತಿರುವ ಸಮಸ್ಯೆ ಯಾವುದೆಂಬ ಪ್ರಶ್ನೆಗೆ ಮತ್ತು ಸಮಾಜಮುಖಿಯಾಗಿ ತಮಗಿರಬೇಕಾದ ಕಾಳಜಿಗಳ ಬಗ್ಗೆ ತುಂಬ ಪರಿಣಾಮಕಾರಿಯಾಗಿ ಮತ್ತು ಅಷ್ಟೇ ಆಶಾದಾಯಕವಾಗಿ ನಮ್ಮ ಯುವಪೀಳಿಗೆ ಸ್ಪಂದಿಸಿತು.

## ಸರಕಾರೀ ಯೋಜನೆಗಳ ಬಗ್ಗೆ ಯುವಸಮುದಾಯಕ್ಕಿರುವ ಅರಿವು ಮತ್ತು ತಿಳಿವಳಿಕೆ

ಸರಕಾರದ ಯೋಜನೆಗಳ ಬಗ್ಗೆ ಎಷ್ಟು ಜನರಿಗೆ ಎಷ್ಟರ ಮಟ್ಟಿಗೆ ತಿಳಿವಳಿಕೆಯಿದೆ? ಅದರಲ್ಲಿ ಎಷ್ಟು ಜನರು ಈ ಯೋಜನೆಗಳ ಉಪಯೋಗವನ್ನು ಪಡೆದುಕೊಳ್ಳುತ್ತಿದ್ದಾರೆ? ಈ ಸಮೀಕ್ಷೆಯಲ್ಲಿ ಸರಕಾರದ ಆಯ್ದ ಕೆಲವೇ ಯೋಜನೆಗಳನ್ನು ಪಟ್ಟಿಮಾಡಿಕೊಂಡು, ಅವುಗಳಿಗೆ ಸಂಬಂಧಿಸಿದಂತೆ ಮಾತ್ರವೇ ಪ್ರಶ್ನೆಗಳನ್ನು ಕೇಳಲಾಯಿತು. ಸಮೀಕ್ಷೆಯ ಅಂಗವಾಗಿ, ತುಂಬಾ ಜಾಗರೂಕವಾಗಿ ಆಯ್ಕೆ ಮಾಡಿಕೊಂಡಿದ್ದ ಸರಕಾರದ ಮೂರು ಬಹು ಮುಖ್ಯ ಯೋಜನೆಗಳ ಬಗ್ಗೆ ಪ್ರಶ್ನೆಗಳನ್ನು ಕೇಳಲಾಯಿತು. ಆ ಪ್ರಶ್ನೆಗಳೆಂದರೆ:

ಅ) ಭಾಗ್ಯಲಕ್ಷ್ಮಿ ಯೋಜನೆ

ಆ) ಸಂಧ್ಯಾ ಯೋಜನೆ

ಇ) ಆರೋಗ್ಯ ಕವಚ

ಅವರಿಗೆ ಕೇಳಲಾದ ಎರಡು ಪ್ರಶ್ನೆಗಳೆಂದರೆ, ನಿಮಗೆ ಈ ಯೋಜನೆಗಳ ಬಗ್ಗೆ ತಿಳಿದಿದೆಯೇ ಮತ್ತು ಅವರ ಅಥವಾ ಅವರ ಬಂಧುಗಳ ಪೈಕಿ ಯಾರಾದರೂ ಫಲಾನುಭವಿಗಳು ಇರುವರೇ.

ಶೇಕಡಾ 80ರಷ್ಟು ಜನ ಭಾಗ್ಯಲಕ್ಷ್ಮಿ ಯೋಜನೆಗಳ ಬಗ್ಗೆ ತಿಳಿದವರಾಗಿದ್ದರು. ಹಳ್ಳಿಗಳಲ್ಲಿರುವ ಜನರಿಗೆ ಹೋಲಿಸಿದಾಗ ಪಟ್ಟಣಗಳಲ್ಲಿರುವ ಜನರು ಈ ಯೋಜನೆಗಳ ಬಗ್ಗೆ ತಿಳಿದುಕೊಂಡಿದ್ದರು ಹಾಗೂ ಅದರ ಬಗ್ಗೆ ಕೇಳಿ ತಿಳಿದುಕೊಂಡಿದ್ದವರ ಪೈಕಿ ಕೂಡ ನಾಲ್ಕನೇ ಒಂದರಷ್ಟು ಜನರು ಮಾತ್ರ ಆ ಯೋಜನೆಯ ಲಾಭವನ್ನು ಪಡೆದುಕೊಂಡದ್ದಾಗಿ ತಿಳಿಸಿದರು. ಇಲ್ಲಿಯೂ ಕೂಡ, ಫಲಾನುಭವಿಗಳಲ್ಲಿ ಹೆಚ್ಚಿನವರು ಸಣ್ಣ ಸಣ್ಣ ಪಟ್ಟಣಗಳಲ್ಲಿ ಇರುವವರಾಗಿದ್ದರು. ಈ ಯೋಜನೆಯ ಉಪಯುಕ್ತತೆಯನ್ನು ಸಮಾಜದ ಎಲ್ಲ ಆರ್ಥಿಕ ವರ್ಗದವರಿಗೆ ತಲುಪಿಸಲಾಗಿದ್ದಂತೆ ಕಂಡು ಬಂತು. ಸುಧಾರಿತ ಜನಾಂಗದವರು ಮಾತ್ರವೇ ಈ ಯೋಜನೆಯ ಲಾಭವನ್ನು ಅಷ್ಟಾಗಿ ಪಡೆದೇ ಇಲ್ಲವೆಂಬುದರ ಬಗ್ಗೆ ಮಾಹಿತಿ ಲಭ್ಯವಾಯಿತು.

ನಾಲ್ಕನೇ ಒಂದರಷ್ಟು ಜನ ಆರೋಗ್ಯ ಕವಚ ಯೋಜನೆಯ ಬಗ್ಗೆ ತಿಳಿದುಕೊಂಡವರಾಗಿದ್ದರು. ಹಳ್ಳಿಗಳು ಮತ್ತು ಬೆಂಗಳೂರು ನಗರದಲ್ಲಿರುವುದಕ್ಕಿಂತ ಸಣ್ಣ ಪಟ್ಟಣಗಳಲ್ಲಿ ಮತ್ತು ನಗರಪ್ರದೇಶಗಳಲ್ಲಿ ಈ ಯೋಜನೆಯ ಲಾಭವನ್ನು ಪಡೆದುಕೊಂಡವರು ಹೆಚ್ಚು ಜನರಿದ್ದರು. ತೀರಾ ಕೆಳವರ್ಗ ಮತ್ತು ಅತ್ಯಂತ ಸುಧಾರಿತ ವರ್ಗದವರಿಗಿಂತ ಹೆಚ್ಚಾಗಿ, ಕೆಳಮಧ್ಯಮ ಮತ್ತು ಮಧ್ಯಮ ವರ್ಗದವರೇ ಈ ಯೋಜನೆಯ ಬಗ್ಗೆ ತಿಳಿದುಕೊಂಡವರಾಗಿದ್ದರು. ಅದರಲ್ಲೂ, ಪ್ರತಿ ಹತ್ತರಲ್ಲಿ ಇಬ್ಬರು ನೇರವಾಗಿ ಅಥವಾ ಅವರ ಬಂಧುಗಳಾದವರು ಮಾತ್ರವೇ ಈ ಯೋಜನೆಯ ಲಾಭ ಪಡೆದವರಾಗಿದ್ದರು.

ಮೂರನೇ ಎರಡರಷ್ಟು ಜನರು ಸಂಧ್ಯಾ ಯೋಜನೆಯ ಬಗ್ಗೆ ತಿಳಿದವರಾಗಿದ್ದರು. ಇಲ್ಲಿಯೂ ಸಹ ಇತರ ಪ್ರದೇಶಗಳಿಗೆ ಹೋಲಿಸಿದರೆ, ಸಣ್ಣ ಸಣ್ಣ ಪಟ್ಟಣಗಳಲ್ಲಿಯೇ ಅದರ ಬಗ್ಗೆ ತಿಳಿದುಕೊಂಡವರೂ ಮತ್ತು ಅದರ ಲಾಭವನ್ನು ಪಡೆದವರೂ ಇದ್ದರು. ತೀರಾ ಕೆಳವರ್ಗ ಮತ್ತು ಅತ್ಯಂತ ಸುಧಾರಿತ ವರ್ಗದವರಿಗೆ ಹೋಲಿಸಿದರೆ, ಹೆಚ್ಚಾಗಿ ಕೆಳಮಧ್ಯಮ ಮತ್ತು ಮಧ್ಯಮ



ವರ್ಗದವರೇ ಈ ಯೋಜನೆಯ ಬಗ್ಗೆ ತಿಳಿದುಕೊಂಡವರಾಗಿದ್ದರು. ಈ ಯೋಜನೆಯ ಬಗ್ಗೆ ತಿಳಿದುಕೊಂಡಿದ್ದ ಪ್ರತಿ ಹತ್ತು ಜನರ ಪೈಕಿ ಇಬ್ಬರು ನೇರವಾಗಿ ಇದರ ಲಾಭವನ್ನು ಪಡೆದವರಾಗಿದ್ದರು ಅಥವಾ ಅವರ ಹತ್ತಿರದ ಬಂಧುಗಳ ಪೈಕಿ ಯಾರಾದರೊಬ್ಬರು ಫಲಾನುಭವಿಗಳು ಇದರ ಲಾಭವನ್ನು ಪಡೆದವರಾಗಿದ್ದರು. ಫಲಾನುಭವಿಗಳ ಪೈಕಿ ಹೆಚ್ಚಿನವರು ಹಳ್ಳಿಗಳಲ್ಲಿ ಮತ್ತು ಸಣ್ಣ ಪಟ್ಟಣಗಳಲ್ಲಿ ಇರುವವರಾಗಿದ್ದರು.

ಇದರಿಂದ ಈ ಮೂರೂ ಯೋಜನೆಗಳ ಬಗ್ಗೆ ಜನರಿಗೆ ತಿಳಿವಳಿಕೆಯ ಪ್ರಮಾಣ ಗಮನಾರ್ಹವಾಗಿ ಹೆಚ್ಚಿದ್ದುದು ತಿಳಿದು ಬರುತ್ತದೆ. ಇಷ್ಟಾಗಿಯೂ, ಈ ಯೋಜನೆಯ ಫಲಾನುಭವಿ ಕುಟುಂಬಗಳ ಸಂಖ್ಯೆಯು ಕಡಿಮೆಯೆಂದೇ ಹೇಳಬಹುದು. ಹಳ್ಳಿಗಳಲ್ಲಿ ಈ ಯೋಜನೆಗಳ ಲಾಭ ಪಡೆದುಕೊಂಡವರಿಗಿಂತ ಸಣ್ಣ ಪಟ್ಟಣಗಳಲ್ಲಿ ಪಡೆದವರ ಸಂಖ್ಯೆಯನ್ನು ಗಮನಿಸಿದರೆ, ಈ ಯೋಜನೆಗಳ ಅಸಮಾನ ಹಂಚುವಿಕೆಯನ್ನು ನಾವಿಲ್ಲಿ ಗಮನಿಸಬಹುದು.

## ಅಂತರ್‌ಪ್ರಾದೇಶಿಕ ಸಮಸ್ಯೆಗಳು

ಆರು ವಿವಿಧ ಪ್ರದೇಶಗಳನ್ನು ಮುಂದಿಟ್ಟುಕೊಂಡು, ಕರ್ನಾಟಕವನ್ನು ಸಮೀಕ್ಷೆಗೊಳಪಡಿಸಲಾಯಿತು.

ಅ) ಹೈದರಾಬಾದ್ ಕರ್ನಾಟಕ ಪ್ರದೇಶ (ಹೈದರಾಬಾದ್ ನಿಜಾಮರ ಆಡಳಿತಾವಧಿಯಲ್ಲಿ)

ಆ) ಮುಂಬೈ ಕರ್ನಾಟಕ ಪ್ರದೇಶ (ಬ್ರಿಟಿಷರ ಕಾಲದಲ್ಲಿ ಬಾಂಬೆ ಪ್ರೆಸಿಡೆನ್ಸಿ ಎಂದು ಹೆಸರಾಗಿದ್ದ ಪ್ರದೇಶ)

ಇ) ಕರಾವಳಿ ಕರ್ನಾಟಕ

ಈ) ಮಧ್ಯ ಕರ್ನಾಟಕ

ಉ) ದಕ್ಷಿಣ ಕರ್ನಾಟಕ (ಹಿಂದಕ್ಕೆ ಬೆಂಗಳೂರು ಪ್ರದೇಶವನ್ನು ರಕ್ಷಿಸಿದ್ದ ವೈಭವಯುತ ಮೈಸೂರು ರಾಜ್ಯ) ಮತ್ತು

ಊ) ಬೆಂಗಳೂರು (ನಗರ ಮತ್ತು ಗ್ರಾಮೀಣ)

ಇಲ್ಲಿ ಪಟ್ಟಿ ಮಾಡಲಾಗಿರುವ ಪ್ರತಿ ಪ್ರದೇಶ ಮತ್ತು ಅದರ ಜನತೆಗೂ ಅದರದ್ದೇ ಆದ ಒಂದಕ್ಕೊಂದು ಭಿನ್ನವಾಗಿರುವ ಸವಾಲುಗಳು ಮತ್ತು ಸಮಸ್ಯೆಗಳು ಇದ್ದೇ ಇರುವುದು ಸಮೀಕ್ಷೆಯಿಂದ ತಿಳಿದು ಬರುತ್ತದೆ. ಈ ಸಮೀಕ್ಷೆಯಲ್ಲಿ, ತಮ್ಮ ತಮ್ಮ ಪ್ರದೇಶಗಳಲ್ಲಿ ಜನರು ಎದುರಿಸುತ್ತಿರುವ ಸಮಸ್ಯೆಗಳು ಯಾವುವು ಎಂಬ ಬಗ್ಗೆ ಅಲ್ಲಿನವರನ್ನು ಪ್ರಶ್ನೆ ಕೇಳಲಾಯಿತು (ಇದರೊಂದಿಗೆ ಅವರಿಗೆ ಅವರವರ ಪ್ರದೇಶಗಳ ಹೆಸರುಗಳನ್ನು ಹೇಳಲಾಗುತ್ತಿತ್ತು).




n - 8597

ಹೈದರಾಬಾದ್ ಕರ್ನಾಟಕ ಮತ್ತು ಮುಂಬೈ ಕರ್ನಾಟಕ ಪ್ರದೇಶಗಳ ಜನರಿಗಿದ್ದ ಅತ್ಯಂತ ಗಂಭೀರ ಸಮಸ್ಯೆಯೆಂದರೆ, ಅಸಮರ್ಪಕ ಕುಡಿಯುವ ನೀರಿನ ಪೂರೈಕೆ ಮತ್ತು ಅತ್ಯಂತ ಕೆಟ್ಟದಾದ ರಸ್ತೆಗಳು. ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಂತೂ, ಅಭಿಪ್ರಾಯ ಕೇಳಲೆಂದು ಮಾತಾಡಿಸಿದ ಅರ್ಧದಷ್ಟು ಜನ ಇದನ್ನೇ ಅವರ ಗಂಭೀರ ಸಮಸ್ಯೆಯೆಂದು ತಿಳಿಸಿದರು. ಮುಂಬೈ ಕರ್ನಾಟಕ ಪ್ರದೇಶದಲ್ಲಿ ಮಾತನಾಡಿಸಿದ ಪ್ರತಿ ಹತ್ತು ಮಂದಿಯ ಪೈಕಿ ನಾಲ್ವರಿಗೆ ಕೂಡ ಅಸಮರ್ಪಕ ನೀರಿನ ಸೌಲಭ್ಯ ಮತ್ತು ಕೆಟ್ಟ ರಸ್ತೆಗಳೇ ಸಮಸ್ಯೆಗಳಾಗಿದ್ದವು. ದಕ್ಷಿಣ ಕರ್ನಾಟಕದಲ್ಲಿಯೂ ಪರಿಸ್ಥಿತಿ ಹೆಚ್ಚೂ ಕಡಿಮೆ ಇದೇ ರೀತಿಯಾಗಿತ್ತು. ಬೆಂಗಳೂರಿನಲ್ಲಿ ಮಾತಾಡಿಸಿದ ಕಾಲುಭಾಗದಷ್ಟು ಜನ ಸಂಚಾರ ದಟ್ಟಣೆಯ ಸಮಸ್ಯೆಯನ್ನು ವಿವರಿಸಿ ಅದೇ ಅವರೆದುರಿಸುತ್ತಿರುವ ಅತಿ ದೊಡ್ಡ ಸವಾಲು ಮತ್ತು ಸಮಸ್ಯೆಯೆಂದರು. ಕರಾವಳಿ ಕರ್ನಾಟಕದ ಜನರ ಪೈಕಿ, ಪ್ರತಿ ಹತ್ತರಲ್ಲಿ ಇಬ್ಬರು ಪರಿಸರ ಮಲಿನತೆ ಅವರಿಗಿರುವ ಅತ್ಯಂತ ದೊಡ್ಡ ಸಮಸ್ಯೆ ಎಂಬುದಾಗಿ ತಿಳಿಸಿದರು.

ಯುವಸಮುದಾಯವು ತಮ್ಮ ತಮ್ಮ ಪ್ರದೇಶಗಳ ಸಮಸ್ಯೆಗಳನ್ನು ವಿವರಿಸುವಾಗ ತಂತಮ್ಮ ಪ್ರಾದೇಶಿಕ ಕಾಳಜಿಯನ್ನು ಮತ್ತು ಅಭಿಮಾನವನ್ನೂ ವ್ಯಕ್ತಪಡಿಸಿದರು. ಅವರವರ ಕ್ಷೇತ್ರಗಳಿಗೆ ಅಗತ್ಯವಾಗಿ ಬೇಕಾಗಿರುವ ಸೌಲಭ್ಯಗಳು ಯಾವುವು ಎಂಬುದನ್ನು ವಿವರಿಸಿ ಹೇಳುವಾಗ ಅದರ ಬಗ್ಗೆ ಅವರು ಆಳವಾದ ಕ್ಷೇತ್ರಾಧ್ಯಯನವನ್ನೂ ಮಾಡಿದ್ದರೆಂಬುದು ಅವರ ಧೃಢ ಮಾತುಗಳಲ್ಲಿ ಎದ್ದು ಕಾಣುತ್ತಿತ್ತು. ಸಾಮಾನ್ಯ ಸಮಸ್ಯೆಗಳಾಗಿದ್ದ ಸತತ ವಿದ್ಯುತ್ ಕಡಿತ, ಕುಡಿಯುವ ನೀರಿನ ಅಸಮರ್ಪಕ ಸೌಲಭ್ಯ ಮತ್ತು ಸಂಚಾರ ಯೋಗ್ಯ ರಸ್ತೆ ಸೌಲಭ್ಯಗಳ ಅಗತ್ಯತೆಯನ್ನು ಅವರು ಬಹಳ ಚೆನ್ನಾಗಿ ವಿವರಿಸಿದರು.

## ನಗರ ಮತ್ತು ಗ್ರಾಮೀಣ ಕರ್ನಾಟಕದ ಸವಾಲುಗಳು

ಸಮೀಕ್ಷೆಗೆಂದು ಪ್ರಶ್ನೆ ಕೇಳಲಾದವರ ಪೈಕಿ ನಗರವಾಸಿಗಳು ಮತ್ತು ಗ್ರಾಮೀಣವಾಸಿಗಳು ಎಂಬ ಎರಡು ವಿಭಾಗ ಮಾಡಿಕೊಂಡು, ಅದರಂತೆ, ಅವರವರ ಕ್ಷೇತ್ರಗಳಲ್ಲಿ ಅವರೆದುರಿಸುತ್ತಿದ್ದ ಮುಖ್ಯ ಸಮಸ್ಯೆಗಳನ್ನು ಪಟ್ಟಿಮಾಡುವಂತೆ ಕೇಳಲಾಗಿತ್ತು. ನಗರವಾಸಿಗಳು ಮತ್ತು ಗ್ರಾಮವಾಸಿಗಳು ವ್ಯಕ್ತಪಡಿಸಿದ ಅಭಿಪ್ರಾಯಗಳಿಗೆ ಹೆಚ್ಚಿನ ವ್ಯತ್ಯಾಸವಿರುವುದು ಸ್ಪಷ್ಟವಾಗಿದೆ.




| | ಅನಿಯಮಿತ ವಿದ್ಯುತ್ ಪೂರೈಕೆ | ಅನಿಯಮಿತ ನೀರು ಸರಬರಾಜು | ಕಳಪೆ ಸಾರ್ವಜನಿಕ ಸಾರಿಗೆ | ಶೌಚಾಲಯ ಇಲ್ಲದಿರುವುದು |
|---|---|---|---|---|
| ಅನುಕ್ರಮ-1 | 19 | 18 | 10 | 10 |

n-5945

ಹಳ್ಳಿಗಳಲ್ಲಿ ವಾಸಿಸುವ ಪ್ರತಿ ಹತ್ತು ಜನರ ಪೈಕಿ ಇಬ್ಬರು ಅಸಮರ್ಪಕ ವಿದ್ಯುತ್ ಪೂರೈಕೆಯೇ ಬಹುದೊಡ್ಡ ಸಮಸ್ಯೆ ಮತ್ತು ಸವಾಲು ಎಂದು ಹೇಳಿದರು. ಮತ್ತೆ ಕೆಲವೆಡೆ ಪ್ರತಿ ಹತ್ತು ಜನರಲ್ಲಿ, ಇಬ್ಬರು, ತಮ್ಮ ಹಳ್ಳಿಯಲ್ಲಿ ಕುಡಿಯುವ ನೀರಿನ ಪೂರೈಕೆಯದೇ ಸಮಸ್ಯೆ ಎಂದು ಹೇಳಿದರು. ಎಲ್ಲೋ ಹತ್ತಕ್ಕೆ ಒಬ್ಬರು ಸಾರ್ವಜನಿಕ ಸಾರಿಗೆ ಸೌಲಭ್ಯ ಸರಿಯಾಗಿಲ್ಲ ಎಂದು ತಿಳಿಸಿದರೆ, ಮತ್ತೆ ಒಬ್ಬರು ಹಳ್ಳಿಗಳಲ್ಲಿ ಸಾಮಾನ್ಯವಾಗಿರುವ ಸಾರ್ವಜನಿಕ ಶೌಚಾಲಯಗಳ ತೊಂದರೆ ಮತ್ತು ಕೊರತೆಯ ಬಗ್ಗೆ ಮಾತಾಡಿದರು.






n-3129

ಇನ್ನೊಂದೆಡೆ ನಗರವಾಸಿಗಳು ಪಟ್ಟಿ ಮಾಡಿದ ಸಮಸ್ಯೆಗಳು ಬೇರೆ ತೆರನಾಗಿದ್ದವು. ಕಾಲು ಭಾಗದಷ್ಟು ಜನ ಅಸಮರ್ಪಕ ವಿದ್ಯುತ್ ಪೂರೈಕೆ ಮತ್ತು ಅನಿಯಮಿತ ನೀರು ಪೂರೈಕೆಗಳೇ ತಾವು ಎದುರಿಸುತ್ತಿರುವ ಬಹುದೊಡ್ಡ ಸಮಸ್ಯೆಗಳೆಂದು ತಿಳಿಸಿದರು. ಆರನೇ ಒಂದು ಭಾಗದ ಜನ ತಾವು ನಿತ್ಯವೂ ಓಡಾಡುವ ರಸ್ತೆ ಸೌಲಭ್ಯವೇ ಸರಿಯಾಗಿಲ್ಲ ಎಂದು ದೂರಿದರು. ಮತ್ತೆ ಕೆಲವರು ಪರಿಸರ ಮಲಿನತೆ ಕರ್ನಾಟಕದ ನಗರ ಪ್ರದೇಶಗಳನ್ನು ಕಾಡುತ್ತಿರುವ ಅತಿ ದೊಡ್ಡ ಸಮಸ್ಯೆ ಎಂಬುದಾಗಿ ತಿಳಿಸಿದರು.

ಇಲ್ಲಿಯೂ ಕೂಡಾ, ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ ಯುವಸಮುದಾಯವು ತಾವು ವಾಸಿಸುತ್ತಿದ್ದ ಪರಿಸರ, ವಾತಾವರಣ ಮತ್ತು ತಮ್ಮ ಮನಃಸ್ಥಿತಿಗೆ ಕನ್ನಡಿ ಹಿಡಿದಂತೆ ತಮ್ಮ ಸಮಸ್ಯೆಗಳನ್ನು ಮಂಡಿಸಿದರು. ಇದೊಂದು ಮುಕ್ತ ಚರ್ಚೆಯಾಗಿದ್ದರಿಂದ, ಅವರಿಗೆ ಯಾವ ಆಯ್ಕೆಗಳನ್ನೂ ಕೊಟ್ಟಿರಲಿಲ್ಲ. ಅವರ ಅನಿಸಿಕೆಗಳನ್ನು ಯಥಾವತ್ತಾಗಿ ಇಲ್ಲಿ ನಮೂದಿಸಲಾಗಿದೆ.

## ಸಾರಾಂಶ

### ಕುಟುಂಬ ಮತ್ತು ಸ್ನೇಹವಲಯದ ಪರಿಧಿಯಾಚೆ

1. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ, ಕುಟುಂಬವನ್ನು ಒಂದು ಸಂಸ್ಥೆಯಾಗಿಯೇ ಪರಿಗಣಿಸುವ ರೂಢಿಯಿದೆ ಮತ್ತು ಇಂದಿನ ಯುವಪೀಳಿಗೆಯ ಬದುಕಿಗೆ ಅದು ಕೇಂದ್ರಸ್ಥಾನ ಕೂಡ ಆಗಿದೆ. ಎಲ್ಲ ಬಗೆಯ ಪ್ರಾದೇಶಿಕತೆ, ಸಾಮಾಜಿಕ ಅಂತರಗಳು, ಭಿನ್ನ ಆರ್ಥಿಕ ಹಿನ್ನೆಲೆಗಳು, ಮತ್ತು ಬೇರೆ ಬೇರೆ ಪರಿಸರಗಳನ್ನು ದಾಟಿ, ನಮ್ಮ ಯುವಪೀಳಿಗೆ ಒಂದು ಕುಟುಂಬದಂತೆ ಬೆಳೆದುಕೊಂಡು ಹೋಗುವಷ್ಟರ ಮಟ್ಟಿಗೆ ಇವತ್ತಿನ ಸಮಾಜದ ಚಿತ್ರಣವಿದೆ.

2. ತಾವು ಬೆಳೆದು ಬಂದ ಪರಿಸರಕ್ಕಿಂತಲೂ ಭಿನ್ನವಾದ ಪರಿಸರವನ್ನು ತಮ್ಮ ಮಕ್ಕಳಿಗೆ ಪಾಲಕರು ಒದಗಿಸುತ್ತಿರುವುದನ್ನು ಗಮನಿಸಿದರೆ, ರಾಜ್ಯದ ಯುವಜನತೆಯಲ್ಲಿ ಬದಲಾವಣೆಯ ತಿಳಿಗಾಳಿ ಬೀಸುತ್ತಿರುವುದು ಸ್ಪಷ್ಟವಾಗುತ್ತದೆ.

3. ತಮ್ಮ ತಮ್ಮ ಬದುಕುಗಳನ್ನು ರೂಪಿಸಿಕೊಳ್ಳಲು, ಸೂಕ್ತ ನಿರ್ಣಯಗಳನ್ನು ಕೈಗೊಳ್ಳಲು ಯುವಸಮುದಾಯವು ಸ್ವತಂತ್ರ ಆಲೋಚನಾಕ್ರಮವನ್ನು ರೂಢಿಸಿಕೊಳ್ಳುವಷ್ಟು ಸಬಲವಾಗಿದೆ. ನಿರ್ಣಯ ತೆಗೆದುಕೊಳ್ಳಬೇಕಾದ ಮಹತ್ವದ ಘಟ್ಟದಲ್ಲಿ, ತಮ್ಮ ಪೋಷಕರು/ಪಾಲಕರು ವಹಿಸಿದ ಪಾತ್ರದ ಮಹತ್ವವನ್ನು ಕುರಿತು ಸಹ ಅವರು ತಮ್ಮ ಅನಿಸಿಕೆಗಳನ್ನು ಹಂಚಿಕೊಂಡಿದ್ದಾರೆ. ಈಗಾಗಲೇ, ಒಂದು ಉದ್ಯೋಗದಲ್ಲಿದ್ದು, ತಮ್ಮ ಜೀವನವನ್ನೂ ಪ್ರಾ್ರಂಭಿಸಿರುವ ಇನ್ನೂ ಹಲವಾರು ಯುವಪೀಳಿಗೆಯವರು ಇದೇ ಅನಿಸಿಕೆಯನ್ನು ಹಂಚಿಕೊಂಡಿದ್ದಾರೆ.

4. ತಮ್ಮ ಬದುಕುಗಳ ಮೇಲೆ ತಮ್ಮ ಪೋಷಕರ ಜೀವನಗಳ ಪ್ರಭಾವವು ಜೊತೆಗೆ ತಮ್ಮ ಮಕ್ಕಳುಗಳ ಪ್ರಭಾವವೂ ವಿಶಿಷ್ಟ ರೀತಿಯಲ್ಲಿ ಗಾಢವಾಗಿದ್ದನ್ನು ಅವರು ನೆನಪಿಸಿಕೊಂಡರು. ಹಳ್ಳಿಗಳನ್ನು ಬಿಟ್ಟು ನಗರಗಳಿಗೆ ಹೋದಂತೆ ಈ ಚಿತ್ರಣವನ್ನು ನಾವು ಕಾಣುವುದಿಲ್ಲ. ಅಲ್ಲಿ ಪೋಷಕರ ಪ್ರಭಾವ ತೀರ ಕಮ್ಮಿಯಿದೆ. ಬದಲಿಗೆ, ಅವರಿಗೆ ಅವರ ಮಕ್ಕಳುಗಳ ಪ್ರಭಾವ ಜಾಸ್ತಿ ಎಂದು ಹೇಳಬಹುದು.

5. ತಮ್ಮ ಸಂಬಂಧಿಕರು ಮತ್ತು ಶಿಕ್ಷಕರನ್ನು ಬಿಟ್ಟರೆ ನಮ್ಮ ಯುವಪೀಳಿಗೆ ಹೆಚ್ಚು ನಂಬಿಕೆಯಿಡುವುದು ತಮ್ಮ ಸ್ನೇಹಿತರಲ್ಲಿ. ಯುವಸಮುದಾಯವು ಜನರಲ್ಲಿ ವಿಶ್ವಾಸವಿರಿಸುವ ಪ್ರಕ್ರಿಯೆಯು ನೇರವಾಗಿ ಸಾಮಾಜೀಕರಣಕ್ಕೆ ಸಂಬಂಧಿಸಿದೆ. ಇನ್ನು ಕೆಲವರಲ್ಲಿ ಸೀಮಿತ ಸಂಪರ್ಕ ಮತ್ತು ಸಂಬಂಧಗಳ ನಡುವೆ ಬೆಳೆದಿರುವ ಕಾರಣ ತನ್ನ ಸುತ್ತಲಿನ ಪರಿಸರವನ್ನು ಅನುಮಾನಿಸಿ ನೋಡುವ ಲಕ್ಷಣಗಳು ಕಂಡುಬರುತ್ತವೆ.

6. ಬದಲಾಗುತ್ತಿರುವ ವಸ್ತುಸ್ಥಿತಿಗಳನ್ನು ಗಮನಿಸಿದರೆ, ಯುವಪೀಳಿಗೆಯು ತಮ್ಮ ವಿರುದ್ಧ ಲಿಂಗಿಗಳೊಡನೆ ಹೆಚ್ಚು ಆಪ್ತವಾಗಿ ಬೆರೆಯುವುದು ಕಂಡುಬರುತ್ತದೆ. ಅದರಲ್ಲೂ ಹಳ್ಳಿಗಳು ಮತ್ತು ಪಟ್ಟಣಗಳಿಗೆ ಹೋಲಿಸಿದಾಗ ನಗರಪ್ರದೇಶಗಳಲ್ಲಿ ಈ ರೀತಿಯ ವಾತಾವರಣ ಹೆಚ್ಚುತ್ತಿರುವುದು ಸಾಮಾನ್ಯವಾಗಿದೆ.

7. ಸಮೀಕ್ಷೆಯಲ್ಲಿ ಮಾತಾನಾಡಿದ ರಾಜ್ಯದ ಹಲವರು ತಾವು ತಾರತಮ್ಯದ ತೊಳಲಾಟಗಳನ್ನು ಅನುಭವಿಸಿರುವುದಾಗಿ ವರದಿ ಮಾಡಿದ್ದಾರೆ. ಹೆಚ್ಚಿನವರು ಅನುಭವಿಸಿದ ತಾರತಮ್ಯದ ಸಂಗತಿಗಳು ಆರ್ಥಿಕ ಹಿನ್ನೆಲೆಯನ್ನು ಅವಲಂಬಿಸಿದವಾಗಿದ್ದವು. ಜಾತಿಯನ್ನಾಧರಿಸಿ ತಾರತಮ್ಯಕ್ಕೊಳಗಾದವರ, ಅದರಲ್ಲೂ ದಲಿತ ಮತ್ತು ಹಿಂದುಳಿದ ಪಂಗಡಕ್ಕೆ ಸೇರಿದವರ ಅನುಭವಗಳೂ ವ್ಯಕ್ತವಾದವು. ಇನ್ನೊಂದೆಡೆ ಯುವತಿಯರು, ತಾವು ಪುರುಷವರ್ಗದವರಿಂದ ತಾರತಮ್ಯಕ್ಕೊಳಗಾಗಿದ್ದೇವೆ ಎಂಬ ಅಂಶವನ್ನೂ ಒತ್ತಿಹೇಳಿದರು. ಧಾರ್ಮಿಕನೆಲೆಯಲ್ಲಿ ತಾರತಮ್ಯದ ಉದಾಹರಣೆಗಳು ಇಲ್ಲವೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಇದ್ದಾಗ್ಯೂ, ಎಲ್ಲೋ ಅಲ್ಪಸಂಖ್ಯಾತ ಯುವಸಮುದಾಯದವರಿಂದ ಮಾತ್ರವೇ ಈ ಭಾವನೆ ವ್ಯಕ್ತವಾಗಿದೆ.

### ನಂಬಿಕೆ ಮತ್ತು ಆಕಾಂಕ್ಷೆಗಳು – ಯುವಜನತೆಯ ಎದುರಿಸುತ್ತಿರುವ ಸವಾಲುಗಳು ಮತ್ತು ಸಂಕಷ್ಟಗಳು

8. ಹೊಸಪೀಳಿಗೆಯ ಯುವ ಕನ್ನಡಿಗರ ಸಮುದಾಯವು ತುಂಬ ಆಸಕ್ತಿಕರವಾದ ಉದ್ದೇಶಗಳನ್ನೂ, ಗುರಿಗಳನ್ನೂ ಹೊಂದಿದೆ. ಉನ್ನತ ಶಿಕ್ಷಣ ಪಡೆಯುವುದು ಅಂಥ ಪ್ರಮುಖ ಗುರಿಗಳಲ್ಲೊಂದು. ಈಗಾಗಲೇ ಉನ್ನತ ಶಿಕ್ಷಣವನ್ನು ಪಡೆದುಕೊಂಡಿದ್ದವರು ಅದನು ಅಷ್ಟು

ಅಷ್ಟು ಮುಖ್ಯವಾಗಿ ಪರಿಗಣಿಸಲಿಲ್ಲ. ಅದರಿಂದ ವಂಚಿತರಾಗಿದ್ದವರು ಅದನ್ನು ಅತ್ಯಂತ ಮುಖ್ಯ ಗುರಿಗಳ ಪಟ್ಟಿಯಲ್ಲಿ ಸೇರಿಸಿಕೊಂಡಿದ್ದರು. ಅವರ ಉದ್ದೇಶಗಳನ್ನು, ಲಕ್ಷ್ಯಗಳನ್ನು ಗಮನಿಸಿದಾಗ ಕರ್ನಾಟಕವನ್ನು ಒಂದು ವಿವೇಕಯುತ ಸಮಾಜದ ರಾಜ್ಯವನ್ನಾಗಿ ನಿರ್ಮಿಸುವ ಗುರಿ ಇದ್ದುದು ಸ್ಪಷ್ಟವಾಗಿತ್ತು.

9. ತುಂಬಾ ಮೂಲಭೂತ ಸೌಲಭ್ಯಗಳನ್ನು ಪಡೆದುಕೊಳ್ಳುವುದು ಅವರ ಮತ್ತೊಂದು ಮುಖ್ಯ ಉದ್ದೇಶಗಳಲ್ಲೊಂದಾಗಿತ್ತು. ಇದನ್ನೇ ಮಿಕ್ಕೆಲ್ಲ ಸಾಮಾಜಿಕ ಪಂಗಡಗಳಲ್ಲೂ, ಸ್ತರಗಳಲ್ಲೂ ನೋಡಬಹುದಾಗಿತ್ತು.

10. ಸಮಾಜವು ತಮಗೆ ಹೆಚ್ಚಿನ ಹೊಣೆಗಾರಿಕೆಯನ್ನು ಕೊಡಬೇಕು ಎನ್ನುವ ಅಭಿಪ್ರಾಯವನ್ನೇ ಈ ಪೀಳಿಗೆಯವರು ಒತ್ತಿ ಹೇಳುವ ಅಂಶವಾಗಿದೆ. ನವಸಮಾಜ ನಿರ್ಮಾಣದಂತಹ ಜವಾಬ್ದಾರಿಯುತ ವಿಷಯದಲ್ಲಿ, ತಾವು ಅರ್ಹರಿದ್ದಾಗಲೂ ಕೂಡ ತನಗೆ ನೀಡಬಹುದಾದ ಸಾಮಾಜಿಕ ಹೊಣೆಗಾರಿಕೆಯನ್ನು ತಮಗೆ ವಹಿಸಿಕೊಡಲಾಗಿಲ್ಲ ಎಂಬ ಅಸಮಾಧಾನವೂ ಕೂಡ ಅವರಲ್ಲಿತ್ತು.

11. ಮಿಕ್ಕೆಲ್ಲರಿಗಿಂತ ಮಿಗಿಲಾಗಿ ಹೆಚ್ಚಿನದನ್ನೇನಾದರೂ ತಾವೂ ಕೂಡಾ ಸಾಧಿಸಬಲ್ಲೆವು ಎಂಬ ಅಪರಿಮಿತವಾದ ಸ್ಪರ್ಧಾತ್ಮಕವಾದ ಆಶಾಭಾವನೆ ಅವರಲ್ಲಿ ತುಂಬಿ ತುಳುಕುತ್ತಿತ್ತು ಮಾತ್ರವಲ್ಲ, ತಮ್ಮ ಸಾಮರ್ಥ್ಯಗಳ ಕುರಿತು ಅವರಿಗೆ ಅತ್ಯಂತ ಹೆಚ್ಚು ಅರಿವು ಮತ್ತು ನಂಬಿಕೆಗಳೂ ಇದ್ದವು. ನಗರಗಳಲ್ಲಿನ ಉನ್ನತ ಶಿಕ್ಷಣ ಪಡೆದಿದ್ದ ಯುವಸಮುದಾಯದಲ್ಲಿ ಈ ಬಗೆಯ ಆಶಾಭಾವನೆ ಮತ್ತು ಸಾಧಿಸುವ ಅದಮ್ಯ ಉತ್ಸಾಹಗಳು ಇನ್ನೂ ಹೆಚ್ಚಿನ ಪ್ರಮಾಣದಲ್ಲಿದ್ದುದು ಕಂಡುಬಂತು.

12. ಸಂತೋಷವಾಗಿರಲು ಹಣ ಮಾಡುವುದು ಅವಶ್ಯಕವೇ? ಎಂಬ ಪ್ರಶ್ನೆಗೆ ಯುವಸಮುದಾಯ ನೀಡಿದ ಉತ್ತರಗಳಿಂದ ಅವರ ವ್ಯಾವಹಾರಿಕ ಅನಿಸಿಕೆಗಳ ಸ್ಪಷ್ಟ ಚಿತ್ರಣ ಸಿಕ್ಕಿತು.

13. ವೈಯಕ್ತಿಕ ಸ್ವಾತಂತ್ರ್ಯ ಮತ್ತು ಒಂದು ಗುಂಪಿನ ನಡುವೆ ಇದ್ದು ಗುರುತಿಸಿಕೊಳ್ಳುವಿಕೆಯ ನಡುವಿನ ದ್ವಂದ್ವದ ಭಾವನೆ ಬಹುತೇಕ ಯುವಜನತೆಗೆ ಇದ್ದದ್ದು ಸ್ಪಷ್ಟವಾಗಿತ್ತು. ಹಲವಾರು ಸಂದರ್ಭಗಳಲ್ಲಿ, ತಮ್ಮ ಜೀವನಗಳಲ್ಲಿ ನಡೆಯುವ ಎಷ್ಟೋ ಸಂದರ್ಭಗಳ ಮೇಲೆ ತಮಗೆ ಹಿಡಿತವಿರುವುದಿಲ್ಲವೆಂದೂ, ಸಾಕಷ್ಟು ಸಲ ತಪ್ಪು ಕೆಲಸಗಳೇ ನಡೆದಿರುವವೆಂದೂ ಅವರು ತಿಳಿಸಿದ ರೀತಿಯಲ್ಲೇ ಈ ಅಂಶವು ಸ್ಪಷ್ಟವಾಗಿ ತೋರುತ್ತಿತ್ತು. ಸಣ್ಣ ಪಟ್ಟಣಗಳು ಮತ್ತು ಹಳ್ಳಿಗಳಿಗೆ ಹೋಲಿಸಿದಾಗ, ಬೆಂಗಳೂರು ಮಹಾನಗರದಲ್ಲೇ ಈ ರೀತಿಯ ದ್ವಂದ್ವಕ್ಕೊಳಗಾಗುವ ಯುವಪೀಳಿಗೆಯ ಸಂಖ್ಯೆ ಹೆಚ್ಚಾಗಿತ್ತು.

14. ಹೆಚ್ಚಿನವರು ಅನುಭವಿಸುತ್ತಿದ್ದ ಉದ್ವಿಗ್ನತೆಗಳು ಮತ್ತು ಒತ್ತಡದ ಭಾವನೆಗಳಿಗೆ ಅವರ ಉದ್ಯೋಗಗಳು ಮತ್ತು ಔದ್ಯೋಗಿಕ ಆಕಾಂಕ್ಷೆಗಳೇ ಕಾರಣವಾಗಿದ್ದವು. ಅದರಲ್ಲೂ, ಈ ರೀತಿಯ ಒತ್ತಡ ಮತ್ತು ಉದ್ವಿಗ್ನತೆಗಳಿಗೆ ಒಳಗಾದವರಲ್ಲಿ ಹೆಚ್ಚಾಗಿ, ಗ್ರಾಮೀಣ ಯುವಜನತೆ ಮತ್ತು ದಲಿತ ಹಾಗೂ ಹಿಂದುಳಿದ ಪಂಗಡಗಳ ಯುವಜನತೆಯೇ ಇದ್ದರು.

## ಯುವಜನರ ಜೀವನಶೈಲಿಯ ಆಯ್ಕೆಯ ಅವಕಾಶಗಳು

15. ಹೆಚ್ಚಿನ ಯುವಜನತೆ ತಮ್ಮ ಬಿಡುವಿನ ವೇಳೆಯನ್ನು ಸಾಮಾನ್ಯವಾಗಿ ಸಿನಿಮಾ ನೋಡುತ್ತಲೋ, ಇಲ್ಲ ತಿರುಗಾಡುವುದರಲ್ಲಿಯೋ ಕಳೆಯುವವರಾಗಿದ್ದರು. ಬೆಂಗಳೂರಿನ ಯುವಸಮುದಾಯದಲ್ಲಿ, ಪುಸ್ತಕ ಮತ್ತು ಪತ್ರಿಕೆಗಳನ್ನು ಓದುವುದು ಸಾಮಾನ್ಯವಾದ ಹವ್ಯಾಸವಾಗಿ ಕಂಡು ಬಂತು. ಪಟ್ಟಣ ಮತ್ತು ಸಣ್ಣ ಸಣ್ಣ ನಗರಗಳಲ್ಲಿ ಓದುವ ಗೀಳು ಅಷ್ಟಾಗಿ ಇದ್ದಂತೆ ಕಂಡುಬರಲಿಲ್ಲ.

16. ಬಹುತೇಕ ಯುವಪೀಳಿಗೆ ಇಂದಿನ ಆಧುನಿಕ ಶೈಲಿಗೆ ತಕ್ಕಂತಹ ವಸ್ತ್ರಗಳನ್ನು, ಧಿರಿಸುಗಳನ್ನು ಧರಿಸುವ ಪರಿಪಾಠವನ್ನು ಇಟ್ಟುಕೊಂಡಿದ್ದು ಸ್ಪಷ್ಟವಾಗಿತ್ತು. ಅವರ ಈ ನಡವಳಿಕೆ, ಇವತ್ತಿನ ಕಾಲಮಾನಕ್ಕೆ ತಕ್ಕಂತೆ ಇರಬೇಕೆಂಬುದಷ್ಟೇ ಆಗಿತ್ತೇ ಹೊರತು, ಅದನ್ನು ಕಡ್ಡಾಯವಾಗಿ ಪಾಲಿಸುವ ಉದ್ದೇಶವೇನೂ ಅವರಲ್ಲಿ ಇದ್ದಂತೆ ತೋರಲಿಲ್ಲ.



## ರಾಜಕೀಯ, ಆರ್ಥಿಕತೆ ಮತ್ತು ಆಡಳಿತ

17. ಸಮಾಜದಲ್ಲಿ ನೀವು ಬದಲಾಯಿಸ ಬಯಸುವ ಒಂದು ಅಂಶವನ್ನು ತಿಳಿಸಿ ಎಂದು ಕೇಳಿದಾಗ, ಕೆಲವರು ಬಡತನ ಮತ್ತು ಅಸಮಾನತೆಯನ್ನು ಹೋಗಲಾಡಿಸಬೇಕು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ ಯುವಜನತೆ, ಅದೇ ಸಮಯದಲ್ಲಿ, ಭ್ರಷ್ಟಾಚಾರವನ್ನು, ದುರಾಡಳಿತವನ್ನು ನಿರ್ಮೂಲನ ಮಾಡಿ, ಸಮಾಜವನ್ನು ಪುನಶ್ಚೇತನಗೊಳಿಸುವ ಪ್ರಯತ್ನ ಮಾಡಬೇಕಿದೆ ಎಂಬ ಅನಿಸಿಕೆಯನ್ನೂ ವ್ಯಕ್ತಪಡಿಸಿದ್ದಾರೆ.

18. ಸರ್ವರ ಹಿತಾಸಕ್ತಿಯನ್ನು ಕಾಪಾಡುವ ನಿಟ್ಟಿನಲ್ಲಿ ಸರಕಾರವು ಕೆಲಸ ಮಾಡುತ್ತಿದೆಯೇ? ಎಂಬ ಪ್ರಶ್ನೆಯನ್ನು ಕೇಳಿದಾದ, ಮೂರನೇ ಎರಡರಷ್ಟು ಜನ ಸರಕಾರವು ಕೇವಲ ಕೆಲವೇ ಕೆಲವು ಜನರ ಹಿತಾಸಕ್ತಿಯನ್ನು ಕಾಪಾಡುತ್ತದೆ ಅಥವಾ ಯಾರ ಹಿತಾಸಕ್ತಿಯನ್ನೂ ಅದು ಪರಿಗಣಿಸಿಲ್ಲ ಎಂದು ಭಾವಿಸಿದ್ದಾರೆ. ಹಿತಾಸಕ್ತಿಯನ್ನು ಕಾಪಾಡುತ್ತದೆ ಎಂದು ತಿಳಿಸಿದ ಹಲವರು ಶ್ರೀಮಂತವರ್ಗಕ್ಕೆ ಸೇರಿದವರಾಗಿದ್ದರು ಅಥವಾ ಆಡಳಿತ ಪಕ್ಷದ ಅನುಯಾಯಿಗಳಾಗಿದ್ದರು.

19. ಹೆಚ್ಚಿನ ಯುವಜನತೆ ಉನ್ನತ ಶಿಕ್ಷಣದಲ್ಲಿ ಈಗಿರುವಂತೆಯೇ ಸೀಟು ಕಾಯ್ದಿರಿಸುವಿಕೆಯ ಯೋಜನೆಯನ್ನು ಅನುಮೋದಿಸಿದ್ದಾರೆ. ಬೇರೆಯವರಿಗೆ ಹೋಲಿಸಿದರೆ, ಮೇಲ್ಜಾತಿಗೆ ಸೇರಿದವರು ಮತ್ತು ಬೆಂಗಳೂರಿಗರು ಈ ಯೋಜನೆಯನ್ನು ವಿರೋಧಿಸಿದ್ದು ಕಂಡು ಬಂತು.

20. ಕೇವಲ ಸಾಮಾಜಿಕ ತಾರತಮ್ಯಕ್ಕೊಳಗಾದವರಷ್ಟೇ ಅಲ್ಲದೇ, ಹೊಸಬಗೆಯ ಸಶಕ್ತ ಸಮಾಜಕ್ಕೆ ಸೇರಿದ್ದ ಯುವಸಮುದಾಯ ಕೂಡ ವ್ಯವಸ್ಥೆಯಿಂದ ತಮಗಾದ ಅನ್ಯಾಯದ ಕುರಿತು ಅತೃಪ್ತಿಯನ್ನು ವ್ಯಕ್ತಪಡಿಸಿದರು. ಇವರೆಲ್ಲ, ಹೆಚ್ಚು ಬಲಯುತವಾಗಿ ಮತ್ತು ಹಿಂಸಾತ್ಮಕವಾಗಿ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸುವುದೇ ಸಾಮಾಜಿಕ ನ್ಯಾಯವನ್ನು ಪಡೆದುಕೊಳ್ಳಲು ಇರುವ ಏಕೈಕ ಮಾರ್ಗ ಎಂದು ಭಾವಿಸಿದ್ದಾರೆ.

## ಉದ್ಯೋಗಾವಕಾಶಗಳು: ದೃಷ್ಟಿಕೋನಗಳು ಮತ್ತು ನಿರೀಕ್ಷೆಗಳು

21. ಖಾಸಗಿ ಕ್ಷೇತ್ರದಲ್ಲಿ ದುಡಿಯುವುದಕ್ಕಿಂತಲೂ ಸರಕಾರೀ ಉದ್ಯೋಗವನ್ನೇ ಇಂದಿನ ಯುವಜನತೆ ಅಪೇಕ್ಷಿಸುತ್ತಾರೆ. ಸಣ್ಣ ಪಟ್ಟಣಗಳು ಮತ್ತು ನಗರಗಳಲ್ಲಿ ಇದ್ದವರು ಸರಕಾರೀ ಉದ್ಯೋಗದೆಡೆಗೆ ಹೆಚ್ಚು ಆಕರ್ಷಿತರಾಗಿದ್ದುದು ಕಂಡು ಬಂತು.

22. ಪೋಷಕರ ಶೈಕ್ಷಣಿಕ ಸಾಧನೆಗಳು ಯುವಜನತೆ ತಮ್ಮ ಉದ್ಯೋಗವನ್ನು ಆರಿಸಿಕೊಳ್ಳುವಲ್ಲಿ ಪ್ರಭಾವ ಬೀರಿದ ಅಂಶವಾಗಿದೆ. ತಂದೆಯ ಶೈಕ್ಷಣಿಕ ಸಾಧನೆಗಳು ಕೂಡ ಅವರುಗಳು ಖಾಸಗಿ/ಸರಕಾರೀ ಉದ್ಯೋಗಗಳತ್ತ ಆಸಕ್ತಿ ತೋರುವುದಕ್ಕೆ ಇದ್ದ ಒಂದು ಕಾರಣವಾದರೆ, ಪದವೀಧರೆ ತಾಯಂದಿರ ಮಕ್ಕಳುಗಳು ಕೂಡಾ ಖಾಸಗಿ ಅಥವಾ ಸರಕಾರೀ ಉದ್ಯೋಗಗಳತ್ತಲೇ ಮುಖಮಾಡಿದ್ದು ಮತ್ತೊಂದು ಮುಖ್ಯ ಕಾರಣವಾಗಿದ್ದಿತು.

23. ಜಾಗತೀಕರಣದ ಪ್ರಭಾವದ ನಡುವೆಯೂ, ಯುವಜನಾಂಗದ ಆಯ್ಕೆ ತಮ್ಮ ಉದ್ಯೋಗಾವಕಾಶಗಳಿಗಾಗಿ ಹೊರರಾಜ್ಯಗಳತ್ತ ಅಥವಾ ವಿದೇಶದೆಡೆಗೆ ಮುಖ ಮಾಡದೇ, ರಾಜ್ಯದೊಳಗೆಯೇ ಉಳಿಯುವುದಾಗಿದ್ದಿತು.

## ಯುವಪೀಳಿಗೆಯ ಕನಸಿನ ಕರ್ನಾಟಕ

24. ಬಹುತೇಕ ಯುವಸಮುದಾಯ ತಾವು ಕನ್ನಡಿಗರೆಂದು ಹೇಳಿಕೊಳ್ಳಲು ಹೆಮ್ಮೆಯಾಗುತ್ತದೆ ಎಂದದ್ದು ನಿಜಕ್ಕೂ ಹೃದಯಸ್ಪರ್ಶಿಯಾಗಿತ್ತು.

25. ರಾಜ್ಯವು ಎದುರಿಸುತ್ತಿರುವ ಅತಿದೊಡ್ಡ ಸವಾಲು ಯಾವುದು ಎಂಬ ಪ್ರಶ್ನೆಯನ್ನು ಮುಂದಿಟ್ಟಾಗ, ಸೀಮಿತ ಉದ್ಯೋಗಾವಕಾಶಗಳು ಮತ್ತು ವ್ಯಾಪಕ ಭ್ರಷ್ಟಾಚಾರಗಳು ಎಂಬ ಉತ್ತರಗಳು ದೊರೆತವು. ತಮ್ಮ ಮುಂದಿದ್ದ ಸೀಮಿತ ಅವಕಾಶಗಳ ಕುರಿತು ಅವರು ಚಿಂತಿಸುತ್ತಿದ್ದುದು ಸಹಜವಾಗಿತ್ತು. ಯುವಸಮುದಾಯದ ಆದರ್ಶವಾದವು, ಅವರು ಸರಕಾರದ ಭ್ರಷ್ಟಾಚಾರ ಮತ್ತು ದುರಾಡಳಿತಗಳ ವಿರುದ್ಧ ಅಕ್ರೋಶಪಡಲು ಕಾರಣವಾಗಿತ್ತು.



26. ಆಯ್ದ ಕೆಲವೇ ಸರಕಾರೀ ಯೋಜನೆಗಳ ಬಗ್ಗೆ ಅವರಿಗೆ ಸಾಕಷ್ಟು ತಿಳಿವಳಿಕೆ ಇತ್ತು. ಪ್ರತಿಕ್ರಿಯಿಸಿದ (ಅವರ ಕುಟುಂಬವರ್ಗವನ್ನೂ ಸೇರಿ) ಹಲವರಲ್ಲಿ, ಅದರ ಲಾಭವನ್ನು ಪಡೆದವರು ಹೆಚ್ಚಿನ ಸಂಖ್ಯೆಯಲ್ಲಿರಲಿಲ್ಲ. ಈ ಯೋಜನೆಗಳ ಹಂಚಿಕೆಯಲ್ಲಿ ಸಮತೋಲನವಿರಲಿಲ್ಲ ಮತ್ತು ಗ್ರಾಮೀಣ ಕರ್ನಾಟಕವನ್ನಂತೂ ಅದು ತಲುಪಿಯೇ ಇರಲಿಲ್ಲ.

27. ಆಯಾಯ ಪ್ರದೇಶಕ್ಕೆ ತನ್ನದೇ ಆದ ವಿಭಿನ್ನ ಸಮಸ್ಯೆಗಳಿದ್ದವು ಮತ್ತು ಯುವಜನತೆ ತಮ್ಮ ಸಮಸ್ಯೆಗಳನ್ನು ಅಷ್ಟೇ ಧೃಢವಾಗಿ ಸಮೀಕ್ಷೆಯಲ್ಲಿ ವ್ಯಕ್ತಪಡಿಸಿದರು. ಅವರವರ ಪ್ರದೇಶಗಳ ಸವಾಲು ಮತ್ತು ಸಮಸ್ಯೆಗಳನ್ನು ಅವರು ಸರಿಯಾಗಿಯೇ ಗುರುತಿಸಿದ್ದಾರೆ. ನಗರ ಪ್ರದೇಶದ ಸಮಸ್ಯೆಗಳಿಗಿಂತ ಗ್ರಾಮೀಣ ಪ್ರದೇಶದವರು ಎದುರಿಸುತ್ತಿದ್ದ ಸಮಸ್ಯೆಗಳು ತುಂಬಾ ಭಿನ್ನವಾಗಿದ್ದವು. ತಮ್ಮ ಸಮಸ್ಯೆಗಳ ಕುರಿತು ಅತ್ಯಂತ ಸೂಕ್ಷ್ಮವಾದ ಕಾಳಜಿ ಹೊಂದಿದ್ದ ಎಲ್ಲರೂ, ಸರಕಾರವೂ ಕೂಡ ಅಷ್ಟೇ ಕಾಳಜಿಯಿಂದ ಆ ಸಮಸ್ಯೆಗಳಿಗೆ ಸ್ಪಂದಿಸಬೇಕೆನ್ನುವ ಆಶಾಭಾವನೆಯನ್ನು ವ್ಯಕ್ತಪಡಿಸಿದರು.



ಯುವಸಮುದಾಯದಿಂದ ಪಡೆದುಕೊಂಡ ಅಭಿಪ್ರಾಯಗಳನ್ನು ಗಮನದಲ್ಲಿಟ್ಟುಕೊಂಡು, ಸಮೀಕ್ಷೆಯು ಕೆಲವು ಯೋಜನಾ ಅನುಮೋದನೆಗಳನ್ನು ಸರಕಾರದ ಮುಂದಿಡಲು ಅಪೇಕ್ಷಿಸುತ್ತದೆ. ಈ ಅನುಮೋದನೆಗಳು ಸಮಗ್ರ ಸಾಮಾಜಿಕ ಕಲ್ಯಾಣಕ್ಕೆ ಒತ್ತು ನೀಡಿ, ರಾಜ್ಯದ ಹಿತಾಸಕ್ತಿಯನ್ನು ಕಾಪಾಡಲು ಮತ್ತು ಅದರ ಶ್ರೇಯೋಭಿವೃದ್ಧಿಗಾಗಿ ಶ್ರಮಿಸುವಲ್ಲಿ ನಿರತರಾಗಿರುವ ಎಲ್ಲ ಉತ್ಸಾಹಿಗಳಿಗೂ ಉಪಯುಕ್ತವಾಗಬಲ್ಲವೆಂಬ ಆಶಾಭಾವನೆ ಸಮೀಕ್ಷಾ ತಂಡದ್ದು.

1. ಒಂದು ಉತ್ತಮ ಜ್ಞಾನಸಮಾಜವನ್ನು ನಿರ್ಮಿಸುವ ಪ್ರಕ್ರಿಯೆಯಲ್ಲಿ ಕರ್ನಾಟಕವು ಮುಂಚೂಣಿಯಲ್ಲಿರುವುದಕ್ಕೆ ಹೆಮ್ಮೆಪಡುತ್ತದೆ. ರಾಜ್ಯದ ಯುವಜನತೆಗೆ ಕೂಡ ಇದೇ ರೀತಿಯ ಅಭಿಮಾನವಿದ್ದು, ರಾಜ್ಯವನ್ನು ಸಮಗ್ರ ಅಭಿವೃದ್ಧಿಯೆಡೆಗೆ ಕರೆದೊಯ್ಯುವ ಎಲ್ಲ ಆಶಾಭಾವನೆಯನ್ನೂ, ಗುರಿಯನ್ನೂ ಅವರು ಹೊಂದಿದ್ದಾರೆ. ರಾಜ್ಯದಲ್ಲಿ ಲಭ್ಯವಿರುವ ಎಲ್ಲ ಸಂಪನ್ಮೂಲಗಳನ್ನು ಮತ್ತು ಜ್ಞಾನಸಂಪತ್ತನ್ನು ಒಂದೆಡೆ ಕ್ರೋಢೀಕರಿಸಿಕೊಂಡು, ಒಂದು ಸಧೃಢ, ಸಶಕ್ತ, ಕ್ರಿಯಾಶೀಲ ಜ್ಞಾನಸಮಾಜವನ್ನು ನಿರ್ಮಿಸಬೇಕಿದೆ.

2. ಈ ಅಧ್ಯಯನದಿಂದ ಕುಟುಂಬ ವ್ಯವಸ್ಥೆಯು ಯುವಪೀಳಿಗೆಯ ಜೀವನಗಳನ್ನು ರೂಪಿಸುವಲ್ಲಿ ಮಹತ್ತರವಾದ ಪಾತ್ರವಹಿಸುತ್ತದೆ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಹೀಗಾಗಿಯೇ, ಸರಕಾರವು ತನ್ನ ಯೋಜನೆಗಳನ್ನು ರೂಪಿಸುವಾಗ ಕೇವಲ ವ್ಯಕ್ತಿಗತ ಅಭಿವೃದ್ಧಿಯ ಕಡೆಗೆ ಕೇಂದ್ರೀಕರಿಸದೇ, ಆದಷ್ಟು ಕುಟುಂಬದ ಏಳಿಗೆಗೆ ಅನುವಾಗುವ ರೀತಿಯಲ್ಲಿ ರೂಪಿಸಿದರೆ, ಹೆಚ್ಚು ಉಪಯೋಗವಾದೀತು.

3. ಕರ್ನಾಟಕದ ಹೊಸ ಪೀಳಿಗೆಯ ಯುವಜನತೆಗೆ ಪುಟಿದೇಳುವ ಉತ್ಸಾಹಭರಿತ ಆಲೋಚನೆಗಳೂ ಮತ್ತು ಸರಕಾರದಿಂದ ಅಗಾಧವಾದ ನಿರೀಕ್ಷೆಗಳೂ ಇವೆ. ಸರಕಾರವು ಆಡಳಿತ ನಡೆಸುವ ಕ್ರಮದ ಬಗ್ಗೆ ಅವರಲ್ಲಿಯೂ ಕೆಲವು ಋಣಾತ್ಮಕ ಕಲ್ಪನೆಗಳಿವೆ. ಸಾರ್ವಜನಿಕ ಜೀವನದಲ್ಲಿ ತಮ್ಮನ್ನು ತಾವು ಸಂಪೂರ್ಣವಾಗಿ ತೊಡಗಿಸಿಕೊಳ್ಳುವ ವಿಚಾರದಲ್ಲಿ ಯುವಜನತೆಯಲ್ಲಿಯೂ ಕೊರತೆ ಎದ್ದು ಕಾಣುತ್ತದೆ. ಯುವಜನತೆಯ ಅಸಾಧಾರಣ ಪ್ರತಿಭೆ, ಧೀ:ಶಕ್ತಿ ಮತ್ತು ಅವರ ಸಾಮರ್ಥ್ಯಗಳನ್ನು ಸರಿಯಾದ ದಿಕ್ಕಿನಲ್ಲಿ ಹರಿಯಲು ಸಾಧ್ಯವಾಗುವಂತೆ ಮತ್ತು ಆ ಮೂಲಕ ರಾಜ್ಯದ ಅಭಿವೃದ್ಧಿಗೂ ಸಹಕಾರಿಯಾಗುವ ನಿಟ್ಟಿನಲ್ಲಿ ಸರಕಾರವೇ ಕ್ರಮವನ್ನು ಕೈಗೊಳ್ಳಬೇಕಾಗಿದೆ. ರಾಜ್ಯ ರಾಜಕೀಯ ಮತ್ತು ಆಡಳಿತ ಯಂತ್ರ ಸುಗಮವಾಗಿ ಸಾಗಬೇಕಾದರೆ, ಯುವಜನತೆಯನ್ನೂ ತನ್ನ ಯೋಜನೆಗಳಲ್ಲಿ, ಆದ್ಯತೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡಿ ಆ ಮೂಲಕ ಯುವಪ್ರಪಂಚಕ್ಕೆ ಪೂರಕವಾಗಿಯೇ ಆದ್ಯತೆಗಳು ಇರುವ ದಿಶೆಯಲ್ಲಿ ಸರಕಾರವೇ ಕಾರ್ಯಪ್ರವೃತ್ತವಾಗಬೇಕಿದೆ.

4. ತಮ್ಮ ಮಕ್ಕಳ ಭವಿಷ್ಯವನ್ನು ಉಜ್ವಲವಾಗಿ ರೂಪಿಸುವ ಮತ್ತು ಅವರನ್ನು ಕಾಳಜಿಯಿಂದ ನೋಡಿಕೊಳ್ಳುವ ಅತ್ಯಂತ ಜವಾಬ್ದಾರಿಯುತ ಸ್ಥಾನದಲ್ಲಿರುವ ಪಾಲಕರೊಡನೆ, ಶಿಕ್ಷಣ ಸಂಸ್ಥೆಗಳೂ ಕೈಜೋಡಿಸಿ, ಆ ಮೂಲಕ ಸಾತ್ವಿಕ, ಶಿಸ್ತುಬದ್ಧ ಹಾಗೂ ಆದರ್ಶ ಬದುಕೊಂದರ ಮೌಲ್ಯಗಳನ್ನು ತುಂಬಲಿಕ್ಕೆ ನೆರವಾದಲ್ಲಿ, ಖಂಡಿತ ಈ ರೀತಿ ಬೆಳೆಯುವ ಯುವಸಮುದಾಯ ಭವ್ಯ ಭವಿಷ್ಯತ್ತಿನ ನಿರ್ಮಾತೃಗಳಾಗುವುದರಲ್ಲಿ ಸಂದೇಹವೇ ಇಲ್ಲ. ಪಾಲಕರೊಡನೆ, ಈ ಪ್ರಯತ್ನದಲ್ಲಿ ಶಿಕ್ಷಣ ಸಂಸ್ಥೆಗಳೂ (ಖಾಸಗಿ ಮತ್ತು ಸರಕಾರೀ) ಜೊತೆಜೊತೆಯಾಗಿ ಬೆಂಬಲ ನೀಡುವುದು ಈ ಹೊತ್ತಿನ ಅತ್ಯಂತ ತುರ್ತು ಅವಶ್ಯಕತೆಯಾಗಿದೆ. ಒಂದು ಸಧೃಢ, ವಿವೇಕಯುತ ಸಮಾಜವನ್ನು ನಿರ್ಮಿಸುವಲ್ಲಿ, ಸುಜ್ಞಾನದ ಸಮಾಜವನ್ನು ಕಟ್ಟುವಲ್ಲಿ ಶಿಕ್ಷಣ ಸಂಸ್ಥೆಗಳು ತುಂಬಾ ಸೀಮಿತ ಅವಕಾಶಗಳನ್ನು ಒದಗಿಸುತ್ತಿರುವುದು ವಿಪರ್ಯಾಸವೇ ಆಗಿದೆ. ಅತ್ಯಂತ ತುರ್ತಾಗಿ ಈ ವ್ಯವಸ್ಥೆಯನ್ನು ಚಿಕಿತ್ಸೆಗೊಳಪಡಿಸಬಹುದಾದ ಎಲ್ಲ ಅನಿವಾರ್ಯತೆಗಳೂ ಇವೆ.

5. ಯಾವುದೇ ಕುಟುಂಬ ವ್ಯವಸ್ಥೆಯಲ್ಲಿ ತಾಯಿಯಾದವಳಿಗೆ ತನ್ನ ಮಕ್ಕಳ ಉಜ್ವಲ ಭವಿಷ್ಯವನ್ನು ರೂಪಿಸುವ ಮತ್ತು ಅವರ ಗುರಿಗಳನ್ನು ಈಡೇರಿಸಿಕೊಳ್ಳುವಲ್ಲಿ ಅವರಿಗೆ ಮೌಲ್ಯಧಾರಿತವಾಗಿ ಬೆಂಬಲ ನೀಡುವ ಗುರುತರ ಹೊಣೆಗಾರಿಕೆ ಇರುತ್ತದೆ. ಹಾಗಾಗಿಯೇ, ಮುಂದೊಂದುದಿನ ತಾಯಿ ಸ್ಥಾನದ ಈ ಅತ್ಯಂತ ಹೊಣೆಗಾರಿಕೆಯ ಪಾತ್ರವನ್ನು ಸಮರ್ಥವಾಗಿ ನಿಭಾಯಿಸಲು

ಅನುಕೂಲವಾಗುವಂತೆ ಇವತ್ತೇ ಹೆಣ್ಣುಮಕ್ಕಳಿಗೆ ಶಾಲಾ ಶಿಕ್ಷಣವನ್ನು ಕಡ್ಡಾಯವಾಗಿ ಒದಗಿಸುವ ಪ್ರಯತ್ನವನ್ನು ಅತ್ಯಂತ ಹೆಚ್ಚಿನ ಕಾಳಜಿ ಮತ್ತು ಉತ್ಸಾಹದೊಡನೆ ಮಾಡಬೇಕಾಗಿದೆ.

6. ಇವತ್ತು ಸಾಮಾಜಿಕ ಸಬಲೀಕರಣ, ಆರ್ಥಿಕ ಬದಲಾವಣೆಯ ಕಾಲಘಟ್ಟಗಳು ಮತ್ತು ರಾಜಕೀಯವಾಗಿ ಎಚ್ಚರಗೊಳ್ಳುವ ಸ್ಥಿತಿಯಲ್ಲಿರುವ ನಮ್ಮ ನಗರಗಳು ಮತ್ತು ಪಟ್ಟಣ ಪ್ರದೇಶಗಳು ಆಡಳಿತ ಯಂತ್ರಕ್ಕೆ ಹೆಚ್ಚು ನಿಕಟವರ್ತಿಗಳಾಗಿವೆ. ಹೀಗಾಗಿ, ಯೋಜನೆಗಳನ್ನು ರೂಪಿಸುವವರು ಇಂಥ ಆಶಾದಾಯಕ ಪಟ್ಟಣ ಪ್ರದೇಶಗಳನ್ನು ಗುರುತಿಸಿ ಕಾರ್ಯಪ್ರವೃತ್ತರಾಗಬೇಕಿದೆ. ಇಂಥ ಕಡೆಗಳಲ್ಲಿ, ಯುವಸಮುದಾಯದ ಅನಿಸಿಕೆಗಳು, ಅಭಿಪ್ರಾಯಗಳು, ಗುರಿಗಳು ಮತ್ತು ಕನಸುಗಳನ್ನು ಪ್ರಯೋಗಿಸಲು ಅವಕಾಶಗಳನ್ನು ಕೊಡುವ ಮೂಲಕ ಆಡಳಿತ ಯಂತ್ರವು ಅಭಿವೃದ್ಧಿ ಸಾಧಿಸಲೇಬೇಕಾಗಿದೆ.

7. ಗ್ರಾಮೀಣ ಕರ್ನಾಟಕದಲ್ಲಿ ಈ ಬಗೆಯ ಎಲ್ಲ ಸಾಧ್ಯತೆಗಳನ್ನು, ಅವಕಾಶಗಳನ್ನು ಮತ್ತು ಸಾಮರ್ಥ್ಯಗಳನ್ನು ಹೊಸತಾಗಿ, ಹೆಚ್ಚು ಕ್ರಿಯಾಶೀಲವಾಗಿ ವಿಸ್ತರಿಸುವ ಮೂಲಕ ಹೊಸಬಗೆಯ ಸಾಮಾಜಿಕ ಬೆಳವಣಿಗೆಗೆ ನಾಂದಿ ಹಾಡಲೇಬೇಕಿದೆ. ಗ್ರಾಮೀಣ ಪರಿಸರಗಳಲ್ಲಿ ಸಾಮಾನ್ಯವಾಗಿ ಯುವಸಮುದಾಯವು ಹತಾಶರಾಗಿಯೋ, ಅವಕಾಶವಂಚಿತರಾಗಿಯೋ ಅಥವಾ ಬದಲಾವಣೆಯ ಮಾರ್ಗಗಳು ಸಿಕ್ಕದೆಯೋ ಅಲೆಯುತ್ತಿರುತ್ತಾರೆ. ಮಾಹಿತಿಕೋಶಗಳು ಈ ನಿಟ್ಟಿನಲ್ಲಿ ಕಾರ್ಯತತ್ಪರರಾಗಿ, ಅತ್ಯುಚ್ಚಮಟ್ಟದ ಸೌಲಭ್ಯಗಳನ್ನು, ತರಬೇತಿಯನ್ನು ಒದಗಿಸುವುದರ ಮೂಲಕ ಹೊಸತನ್ನು ಸಾಧಿಸಲು ಯುವಪೀಳಿಗೆಗೆ ಅನುವು ಮಾಡಿಕೊಡಬಹುದು.

8. ಕರ್ನಾಟಕದ ಗ್ರಾಮೀಣ ಮತ್ತು ಹೊಸತಾಗಿ ರೂಪುಗೊಳ್ಳುತ್ತಿರುವ ನಗರಪ್ರದೇಶಗಳಲ್ಲಿ, ಎಲ್ಲ ಬಗೆಯ ಜಾತಿ, ಪಂಗಡ, ಧಾರ್ಮಿಕ ಚೌಕಟ್ಟುಗಳನ್ನು ಮೀರಿ ಬೆಸೆದುಕೊಳ್ಳಲು ತಯಾರಿರುವ ಯುವಸಮುದಾಯದವರ ನಡುವೆಯೇ ಒಂದು ಆರೋಗ್ಯಕರ ಹೊಂದಾಣಿಕೆ ಮತ್ತು ಸಾಮರಸ್ಯ ಏರ್ಪಡುವಂತಾಗಬೇಕು. ಆಗ ಅವಕಾಶಗಳೂ ತಾನೇ ತಾನಾಗಿ ತೆರೆದುಕೊಳ್ಳುತ್ತವೆ. ಯಾರೊಡನೆಯೂ ಬೆರೆಯುವುದು ಸಾಧ್ಯವೇ ಇಲ್ಲ ಎಂಬಂತಹ ಮಡಿವಂತಿಕೆಯಿಂದ ದೂರವಾಗಿ, ಇಂತಹ ಸಾಮಾಜಿಕ ಬೆರೆಯುವಿಕೆಗೆ ಅವಕಾಶಗಳನ್ನು ಕಲ್ಪಿಸುವ ನಿಟ್ಟಿನಲ್ಲಿ ತುಂಬ ಕಡಿಮೆ ಅನಿಸುವ ಪ್ರಯತ್ನಗಳೂ ಇಲ್ಲದಿಲ್ಲ, ಆದರೆ ಅದರ ಪ್ರಮಾಣ ಹೆಚ್ಚಾಗಬೇಕಿದೆಯಷ್ಟೇ.

9. ನಮ್ಮ ಶಿಕ್ಷಣ ಕ್ರಮದಲ್ಲಿಯೂ ಸಹ ಸಾಮಾಜಿಕ ಚಟುವಟಿಕೆಗಳಲ್ಲಿ ಹೆಚ್ಚು ಹೆಚ್ಚು ತೊಡಗಿಕೊಳ್ಳುವಂತಹ ಅವಕಾಶಗಳನ್ನು ಯುವಪೀಳಿಗೆಗೆ ಕಲ್ಪಿಸಿಕೊಡಬೇಕಾಗಿದೆ. ಹಾಗೊಮ್ಮೆ ಯುವಸಮುದಾಯವು ತಾವು ಇಂತಹ ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವ ಭರವಸೆಯನ್ನು ವ್ಯಕ್ತಪಡಿಸಿದ್ದಾಗಲೂ, ಅವರಿಗಿದ್ದ ಕೊರತೆಯೆಂದರೆ ಸಾಂಸ್ಥಿಕ ತರಬೇತಿ ಅಥವಾ ಅವಕಾಶಗಳು.

10. ಇವತ್ತು ಹೆಚ್ಚಿನ ಯುವಪೀಳಿಗೆಯು ಗುಂಪಿನ ನಡುವೆ ತಮ್ಮ ಅಸ್ತಿತ್ವನ್ನು ಗುರುತಿಸಿಕೊಳ್ಳುವಷ್ಟು ಸಮರ್ಥರಾಗಿರುವಾಗಲೂ, ತಮ್ಮ ವೈಯಕ್ತಿಕ ಅಸ್ತಿತ್ವವನ್ನು ಎಷ್ಟು ಚೆನ್ನಾಗಿ ಬೆಳೆಸಿಕೊಳ್ಳಬಲ್ಲೆವು ಎಂಬ ವಿಷಯವಾಗಿ ಹೆಚ್ಚು ತೊಳಲಾಟದಲ್ಲಿ ಇರುವಂತೆ ಕಂಡುಬರುತ್ತದೆ. ಹೆಚ್ಚಿನ ವೇಳೆ, ಅಪ್ರಜ್ಞಾಪೂರ್ವಕವಾಗಿ ಒಂದು ಗುಂಪಿನಲ್ಲಿ ತಮ್ಮ ಅಸ್ತಿತ್ವನ್ನು ಉಳಿಸಿಕೊಳ್ಳುವ ಮತ್ತು ಬೆಳೆಸಿಕೊಂಡು ಹೋಗುವ ಒತ್ತಡದ ಪ್ರಯತ್ನದಲ್ಲಿ ಅವರಿದ್ದಾರೆ ಎಂದೇ ಅನಿಸುತ್ತದೆ. ಒಂದು ವೇಳೆ, ಅವರಿಗೆ ತಮ್ಮ ಜೀವನಕಲೆಗಳನ್ನು ಪುನಶ್ಚೇತನಗೊಳಿಸಿಕೊಳ್ಳುವ ನಿಟ್ಟಿನಲ್ಲಿ ಸೂಕ್ತ ತರಬೇತಿ ನೀಡಿದ್ದೇ ಆದಲ್ಲಿ, ಇರುವುದರಲ್ಲಿಯೇ ಉತ್ತಮ ಅವಕಾಶಗಳನ್ನು ಆಯ್ದುಕೊಂಡು, ತಮ್ಮ ವೈಯಕ್ತಿಕ ಸಾಧನೆಗಳ ಜೊತೆಜೊತೆಗೇ, ವ್ಯಾಪಕವಾದ ಸಾಮಾಜಿಕ ಚಟುವಟಿಕೆಗಳಲ್ಲೂ ಕೂಡ ಅವರು ಸಮರ್ಥವಾಗಿ ತೊಡಗಿಕೊಳ್ಳಬಲ್ಲವರಾಗಿದ್ದಾರೆ.

11. ಇಂದಿನ ಯುವಪೀಳಿಗೆಯು ಜವಾಬ್ದಾರಿಗಳನ್ನು ಹೊರಲು ಸಿದ್ಧವಾಗಿದ್ದರೂ ಆ ನಿಟ್ಟಿನಲ್ಲಿ ಅವರಿಗಿರುವ ಅವಕಾಶಗಳು ಮಾತ್ರ ಸೀಮಿತವಾಗಿವೆ. ಯೋಜನೆಗಳನ್ನು ರೂಪಿಸುವ ಸರಕಾರವೇ ಈ ವಿಷಯದಲ್ಲಿ ಯುವಪೀಳಿಗೆಯವರು ತಮ್ಮನ್ನು ತಾವು ಸಮರ್ಥವಾಗಿ ತೊಡಗಿಸಿಕೊಳ್ಳುವುದಕ್ಕೆ ಸೂಕ್ತ ಸಾಂಸ್ಥಿಕ ಹಾಗೂ ತರಬೇತಿ ಕೇಂದ್ರಗಳನ್ನು ಒದಗಿಸಬಹುದಾಗಿದೆ. ಇದರಿಂದ ಅವರಿಗೂ ತಾವು ಸಾಮಾಜಿಕವಾಗಿ ಒಂದು ಕೆಲಸದಲ್ಲಿ ತೊಡಗಿಕೊಂಡಿದ್ದೇವೆ ಎಂಬ ಭಾವನೆ ಮೊಳೆತು, ಅದರಿಂದ ಅವರು ಇನ್ನಷ್ಟು ಜವಾಬ್ದಾರಿಯುತವಾಗಿ, ಬದ್ಧತೆಯಿಂದ ಕಾರ್ಯನಿರ್ವಹಿಸಲು ಎಡೆ ಮಾಡಿಕೊಟ್ಟಂತಾಗುತ್ತದೆ. ಭವಿಷ್ಯದ ಆಡಳಿತ

ಇನ್ನಷ್ಟು ಜವಾಬ್ದಾರಿಯುತವಾಗಿ, ಬದ್ಧತೆಯಿಂದ ಕಾರ್ಯನಿರ್ವಹಿಸಲು ಎಡೆ ಮಾಡಿಕೊಟ್ಟಂತಾಗುತ್ತದೆ. ಭವಿಷ್ಯದ ಆಡಳಿತ ವ್ಯವಸ್ಥೆಯನ್ನು ಸಮರ್ಥವಾಗಿ ನಿರ್ವಹಿಸಲು ಮತ್ತು ನಿಭಾಯಿಸಲು ಅವರಿಗೆ ಸಹಾಯವೂ, ಬೆಂಬಲವೂ ದೊರೆತಂತಾಗುತ್ತದೆ.

12. ಇಂದಿನ ಕಾಲಮಾನದಲ್ಲಿ ಅಧಿಕಾರ/ಆಡಳಿತವೆಂದರೆ ಜನರನ್ನು ತಲುಪುವುದೇ ಆಗಿದೆ. ಆದರೆ, ಬರುಬರುತ್ತ ಇಂದಿನ ಯುವಸಮುದಾಯದವರಿಗೆ ಸರಕಾರವನ್ನು ತಲುಪಲು ಇರುವ ಅವಕಾಶಗಳೇ ಸೀಮಿತವಾಗುತ್ತಿವೆ ಎಂಬ ಭಾವನೆ ಮೂಡತೊಡಗಿದ್ದರೆ ಆಶ್ಚರ್ಯವೇನಿಲ್ಲ. ಆಡಳಿತ ಕ್ರಮದ ಹಲವಾರು ಮಜಲುಗಳಲ್ಲಿ ನಿರ್ಣಯ ತೆಗೆದುಕೊಳ್ಳಲಾಗುವ ಯಾವುದೇ ಪ್ರಕ್ರಿಯೆಯಲ್ಲಿಯೂ ತಮಗೆ ಮುಕ್ತ ಅವಕಾಶಗಳಾಗಲಿ, ಆಸ್ಪದವಾಗಲಿ ಇರದಿರುವುದು ಅವರ ಗಮನಕ್ಕೆ ಬಂದಿದೆ. ಈ ರೀತಿಯ ದ್ವೀಪಮಾದರೀ ನಾಗರಿಕ ಸಮಾಜದಿಂದ ಹಠಾತ್ ಆಗಿ ನಿರ್ಗಮನದ ತೀರ್ಮಾನ ತೆಗೆದುಕೊಳ್ಳುವ ಹಂತಕ್ಕೆ ತಲುಪುವ ಮೊದಲೇ ಸರಕಾರವೂ ಈ ನಿಟ್ಟಿನಲ್ಲಿ ಗಮನ ಹರಿಸಿ, ತನ್ನ ಯೋಜನೆಗಳ ಮೂಲಕ ಜನಸಾಮಾನ್ಯರನ್ನು, ಅದರಲ್ಲೂ ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದವರನ್ನು ತಲುಪುವ ಕ್ರಮ ಕೈಗೊಳ್ಳಲೇಬೇಕಿದೆ.

13. ಸಶಕ್ತ ಹಾಗೂ ಸಬಲ ಸಾಮಾಜಿಕ ವರ್ಗಕ್ಕೆ ಸೇರಿದವರಿಗೂ ಮತ್ತು ಸಾಮಾಜಿಕವಾಗಿ/ಆರ್ಥಿಕವಾಗಿ ದುರ್ಬಲ ವರ್ಗಕ್ಕೆ ಸೇರಿರುವ ಎಲ್ಲರಿಗೂ ಸಾಮಾಜಿಕ ನ್ಯಾಯದ ಬಗ್ಗೆ ತೀವ್ರವಾದ ಕಾಳಜಿ ಮತ್ತು ನಿರೀಕ್ಷೆ ಇದೆ. ರಾಜ್ಯ ಸರಕಾರವಾಗಲಿ, ಆಡಳಿತವರ್ಗವಾಗಲಿ ತಮಗೆ ನ್ಯಾಯಯುತ ಆಡಳಿತವನ್ನು ಒದಗಿಸುತ್ತಾರೆ ಎಂಬ ನಂಬಿಕೆಯಿಂದ ಅವರು ದಿನೇದಿನೇ ದೂರ ಸರಿಯುತ್ತಿದ್ದಾರೆ. ಇದು ವಿನಾಕಾರಣ ಚಳುವಳಿಗಳಿಗೆ, ಮುಷ್ಕರಗಳಿಗೆ, ಹಿಂಸಾಚಾರಕ್ಕೆ ಮತ್ತು ಅನಿವಾರ್ಯವಾಗಿ ಬಲಪ್ರಯೋಗ ಮಾಡುವುದಕ್ಕೆ ಎಡೆಮಾಡಿಕೊಡುತ್ತದೆ. ಸರಕಾರವು ಸೂಕ್ತ ಸಮಯದಲ್ಲಿ ಇಂಥ ಅನಿವಾರ್ಯ ಹಾಗೂ ಅಗತ್ಯದಲ್ಲಿರುವ ಧ್ವನಿಗಳಿಗೆ ಹೆಚ್ಚುಹೆಚ್ಚಾಗಿ ಸ್ಪಂದಿಸಬೇಕಾಗಿದೆ.

14. ಸ್ಥಾನ ಮೀಸಲಾತಿ ವಿಷಯವಾಗಿ ಇರುವ ಯೋಜನೆಗಳ ಅಗತ್ಯತೆಯ ಬಗ್ಗೆ ಯುವಸಮುದಾಯದಲ್ಲಿ ಅಪಾರವಾದ ಕುತೂಹಲ ಮತ್ತು ಸೂಕ್ಷ್ಮತೆಗಳಿವೆ. ಅವರ ಅತೃಪ್ತಿ ಮತ್ತು ಅಸಮಾಧಾನಗಳು ಇರುವುದು ಈ ವಿಷಯವಾಗಿ ಇರುವ ಅಲೋಚನಾಕ್ರಮದ ಬಗ್ಗೆ ಅಲ್ಲ, ಬದಲಾಗಿ ಅದನ್ನು ಅನುಷ್ಠಾನಕ್ಕೆ ತರುವ ವೇಗದಲ್ಲಿ ಸರಕಾರ ತೋರಿಸುತ್ತಿರುವ ವಿಳಂಬ ಧೋರಣೆಯ ಬಗ್ಗೆ. ಯೋಜನೆಗಳನ್ನು ರೂಪಿಸಿರುವ ಆಯೋಗವೇ, ಈ ಬಗ್ಗೆ ಸೂಕ್ತವಾದ ಕ್ರಮ ಕೈಗೊಂಡು, ಅದರ ಬಗ್ಗೆ ಜಾಗೃತಿ ಉಂಟುಮಾಡುವ ಕಾರ್ಯಕ್ರಮಗಳನ್ನು ಸಮಾಜದ ಎಲ್ಲ ವರ್ಗದವರೂ ಪಾಲ್ಗೊಳ್ಳುವ ರೀತಿಯಲ್ಲಿ ಹಮ್ಮಿಕೊಂಡು, ಆ ಮೂಲಕ ಸಾಮಾಜಿಕವಾಗಿ/ಆರ್ಥಿಕವಾಗಿ ದುರ್ಬಲರಾದವರನ್ನು ಕೇಂದ್ರವಾಗಿಟ್ಟುಕೊಂಡು ರೂಪಿಸಿದ ಯೋಜನೆಗಳು ಸರಿಯಾದ ರೀತಿಯಲ್ಲಿ, ಅರ್ಹರಿಗೆ ತಲುಪುತ್ತಿವೆಯೇ ಎಂಬುದನ್ನು ಖಾತರಿಪಡಿಸಿಕೊಳ್ಳುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗಲೇಬೇಕಿದೆ.

15. ರಾಜ್ಯದ ಯುವಸಮುದಾಯಕ್ಕೆ ತಾವು ಕನ್ನಡಿಗರೆಂಬ ಅಪಾರವಾದ ಅಭಿಮಾನ ಇದೆ ಮತ್ತು ಇದೇ ಅಂಶವನ್ನು ಬಳಸಿಕೊಂಡು, ಯೋಜನೆಗಳನ್ನು ರೂಪಿಸುವ ಸಮಿತಿಯು, ಆ ಯುವಸಮುದಾಯದವರು ತಮ್ಮದೇ ಆದ ಸಶಕ್ತ, ವಿಭಿನ್ನ ವ್ಯಕ್ತಿತ್ವವನ್ನು ಅಳವಡಿಸಿಕೊಳ್ಳುವಲ್ಲಿ ಮತ್ತು ಗುರುತಿಸಿಕೊಳ್ಳುವಿಕೆಯನ್ನು ಸಧೃಢಗೊಳಿಸಿಕೊಳ್ಳುವ ನಿಟ್ಟಿನಲ್ಲಿ ಸಹಾಯ ಮಾಡಬೇಕಾಗಿದೆ.

16. ಪ್ರಸ್ತುತ ಉದ್ಯೋಗಾಕಾಂಕ್ಷಿಗಳಿಗಿರುವ ಅವಕಾಶಗಳ ನಿರೀಕ್ಷೆಯನ್ನು ಗಮನಿಸಿದರೆ, ರಾಜ್ಯ ಸರಕಾರವು ಖಾಸಗಿ ಉದ್ಯಮಗಳ ಜೊತೆಗೆ ಕೈಜೋಡಿಸಿಯಾದರೂ ನಿರುದ್ಯೋಗ ಸಮಸ್ಯೆಯನ್ನು ನೀಗಿಸುವತ್ತ ಗಮನಹರಿಸುವ ತುರ್ತು ಇದೆ. ಇದೇ ಉದ್ದೇಶವನ್ನಿಟ್ಟುಕೊಂಡು, ಅಗತ್ಯ ಜೀವನಕಲೆಗಳನ್ನು ಕಲಿಸುವ ನಿಟ್ಟಿನಲ್ಲಿ ಹೆಚ್ಚು ಹೆಚ್ಚು ಕಾರ್ಯಕ್ರಮಗಳನ್ನು, ತರಬೇತಿ ಕಾರ್ಯಾಗಾರಗಳನ್ನು ರಾಜ್ಯಾದ್ಯಂತ ಆಯೋಜಿಸುವ ನಿಟ್ಟಿನಲ್ಲಿ ಕೂಡಾ ನಮ್ಮ ಸರಕಾರ ಕಾರ್ಯಪ್ರವೃತ್ತವಾಗಬೇಕಿದೆ. ಇಂತಹ ಕಾರ್ಯಕ್ರಮಗಳಿಂದ ನಮ್ಮ ಯುವಸಮುದಾಯ ಧನಾತ್ಮಕ ಕುಶಲತೆಗಳನ್ನು ಕಲಿತುಕೊಂಡು ಆ ಮೂಲಕ ತಮ್ಮ ಔದ್ಯೋಗಿಕ ಸಾಮರ್ಥ್ಯಗಳನ್ನು ಹೆಚ್ಚಿಸಿಕೊಳ್ಳಲು ಖಂಡಿತ ಸಹಾಯವಾಗುತ್ತದೆ.

17. ಸರಕಾರವೇ ರೂಪಿಸಿರುವ ಹತ್ತು ಹಲವಾರು ಸಮಾಜಕಲ್ಯಾಣ ಯೋಜನೆಗಳು ಅದರ ಅಡಿಯಲ್ಲಿವೆ. ಇಂಥಹುದೇ ಮೂರು ಯೋಜನೆಗಳನ್ನು ಪತ್ತೆ ಹಚ್ಚಿ, ಅಧ್ಯಯನಕ್ಕೆ ಒಳಪಡಿಸಲಾಯಿತು. ಯಾವ ಉದ್ದೇಶಕ್ಕಾಗಿ ಆ ಯೋಜನೆಗಳನ್ನು ರೂಪಿಸಲಾಗಿದೆಯೋ, ಅದಕ್ಕೆ ಅರ್ಹರಾದವರಿಗೆ ಅವನ್ನು ತಲುಪಿಸುವ ಕೆಲಸವೇ ನಡೆದಿಲ್ಲ. ಇದು ಆ ಯೋಜನೆಯ ನಿರ್ದಿಷ್ಟ ಉದ್ದೇಶವನ್ನೇ ಹಾಳುಗೆಡುವಂಥದ್ದಾಗಿದೆ.

18. ಇತ್ತೀಚೆಗೆ ಯುವಸಮುದಾಯಕ್ಕೆ ರಾಜ್ಯಸರಕಾರವು ತಮ್ಮನ್ನು ಉದ್ದೇಶವಾಗಿಟ್ಟುಕೊಂಡು ಯಾವುದೇ ಬಗೆಯ ಕ್ರಿಯಾಶೀಲ ಅಥವಾ ಉತ್ತೇಜನಕಾರೀ ಯೋಜನೆಗಳನ್ನು ರೂಪಿಸಲು ಪ್ರಯತ್ನಿಸಿಯೇ ಇಲ್ಲ ಎಂಬ ಭಾವನೆ ದಟ್ಟವಾಗುತ್ತಿದೆ. ಇದಕ್ಕಿರುವ ಬಹುಮುಖ್ಯ ಕಾರಣವೆಂದರೆ ಈಗಾಗಲೇ ರೂಪಿಸಿರುವ ಕನಿಷ್ಟ ಯೋಜನೆಗಳನ್ನಾದರೂ ಸರಕಾರವು ಅನುಷ್ಠಾನಕ್ಕೆ ತರುವಲ್ಲಿ ವಿಫಲವಾಗಿರುವುದು ಆಗಿದ್ದರೆ, ಇರುವ ಯೋಜನೆಗಳನ್ನು ಮತ್ತು ಅದರ ಲಾಭಗಳನ್ನು ಅಗತ್ಯ ಇರುವವರಿಗೆ ತಲುಪಿಸುವಲ್ಲಿಯೂ ಅದು ಸಮರ್ಪಕವಾಗಿ, ಕ್ರಿಯಾಶೀಲವಾಗಿ ಕೆಲಸ ಮಾಡದೇ ಇರುವುದೂ ಕೂಡಾ ಆಗಿದೆ.





## ಕರ್ನಾಟಕ ಜ್ಞಾನ ಆಯೋಗ ಕುರಿತು–

ಕರ್ನಾಟಕ ಜ್ಞಾನ ಆಯೋಗವನ್ನು ಸೆಪ್ಟೆಂಬರ್ 2008ರಲ್ಲಿ ಪ್ರಖ್ಯಾತ ಬಾಹ್ಯಾಕಾಶ ವಿಜ್ಞಾನಿ ಹಾಗೂ ಕೇಂದ್ರ ಯೋಜನಾ ಆಯೋಗದ ಸದಸ್ಯರಾದ ಡಾ.ಕೆ. ಕಸ್ತೂರಿರಂಗನ್ ರವರ ಅಧ್ಯಕ್ಷತೆಯಲ್ಲಿ ಸ್ಥಾಪಿಸಲಾಯಿತು.

ಕರ್ನಾಟಕವನ್ನು ಸ್ಪಂದನಶೀಲ ಜ್ಞಾನ ಸಮಾಜವನ್ನಾಗಿ ಪರಿವರ್ತಿಸುವುದು ಆಯೋಗದ ಹೆಗ್ಗುರಿ ಇದನ್ನು ಸಾಧಿಸಲು ಆಯೋಗವು ಈ ಕೆಳಗಿನ ನಿರ್ದೇಶಕ ಬಿಂದುಗಳನ್ನು ಹೊಂದಿರುತ್ತದೆ.

- ಶಿಕ್ಷಣ ವ್ಯವಸ್ಥೆಯಲ್ಲಿ ಉತ್ಕೃಷ್ಟತೆಯನ್ನು ಸಾಧಿಸುವುದು
- ಜ್ಞಾನಸೃಷ್ಟಿಯನ್ನು ಪ್ರೋತ್ಸಾಹಿಸುವುದು
- ಕರ್ನಾಟಕದ ಶೈಕ್ಷಣಿಕ ಮತ್ತು ಜ್ಞಾನಸಂಬಂಧಿತ ಸಂಸ್ಥೆಗಳಲ್ಲಿ, ನಾಯಕತ್ವ ಮತ್ತು ನಿರ್ವಹಣೆಯನ್ನು ಉತ್ತಮಗೊಳಿಸುವುದು
- ಜ್ಞಾನದ ಅನ್ವಯವನ್ನು ಪ್ರೋತ್ಸಾಹಿಸುವುದು
- ಸರ್ಕಾರವು ಸಾರ್ವಜನಿಕರಿಗೆ ಪರಿಣಾಮಕಾರಿಯಾಗಿ ಸೇವೆಗಳನ್ನು ಒದಗಿಸುವಂತೆ ಮಾಡುವುದು
- ಅಂತರ್ವಲಯಗಳ ಸಂವಾದ ಮತ್ತು ಸಂಪರ್ಕಗಳನ್ನು ಪ್ರೋತ್ಸಾಹಿಸುವುದು.

2008 ರಿಂದ ಈ ವರೆಗೆ, ಆಯೋಗವು 60 ಶಿಫಾರಸ್ಸುಗಳನ್ನು ಮಾನ್ಯ ಮುಖ್ಯಮಂತ್ರಿಯವರಿಗೆ ಸಲ್ಲಿಸಿದೆ. ಈ ಶಿಫಾರಸ್ಸುಗಳಲ್ಲಿ 11 ಶಿಫಾರಸ್ಸುಗಳನ್ನು ಪ್ರಕಲ್ಪಗಳಾಗಿ ಕೈಗೆತ್ತಿಕೊಂಡು ವಿವಿಧ ಇಲಾಖೆಗಳ ಸಹಯೋಗದೊಂದಿಗೆ ಅನುಷ್ಠಾನಗೊಳಿಸಲಾಗಿದೆ. ಆಯೋಗದ ಮೂರು ವರ್ಷ ಅವಧಿಯಲ್ಲಿ, ಒಟ್ಟು ಆರು ಸಂಶೋಧನಾ ಅಧ್ಯಯನಗಳನ್ನು ನಿಯೋಜಿಸಲಾಗಿದ್ದು, ಇವುಗಳಲ್ಲಿ ಎರಡು ಅಧ್ಯಯನಗಳು ನವೀನ ರೀತಿಯ ಬೃಹತ್ ಅಧ್ಯಯನಗಳಾಗಿವೆ. ಇದಲ್ಲದೆ 27 ಶಿಫಾರಸ್ಸುಗಳನ್ನು ಸಂಬಂಧಿಸಿದ ಇಲಾಖೆಗಳು ಅನುಷ್ಠಾನಗೊಳಿಸಲು ಸಕ್ರಿಯವಾಗಿ ಪರಿಗಣಿಸಿದೆ. ಜೂನ್ 2011ರಲ್ಲಿ ಉನ್ನತ ಶಿಕ್ಷಣ ಇಲಾಖೆಯ ಸಹಯೋಗದೊಂದಿಗೆ ಆರಂಭಿಸಲಾದ "ಜ್ಞಾನ ಫೆಲೋಶಿಪ್" ಯೋಜನೆಯು ಕರ್ನಾಟಕ ಜ್ಞಾನ ಆಯೋಗದ ಪ್ರಧಾನ ಯೋಜನೆಗಳೊಂದಾಗಿದೆ.

ಕರ್ನಾಟಕ ಜ್ಞಾನ ಆಯೋಗದ ಸಂರಚನೆ ಹಾಗೂ ಕಾರ್ಯದ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ನಮ್ಮ **www.jnanaayoga.in** ವೆಬ್‌ಸೈಟ್‌ಗೆ ಭೇಟಿ ನೀಡಿ.

ನೀವು ನಮ್ಮನ್ನು ಸಂಪರ್ಕಿಸ ಬೇಕಾದಲ್ಲಿ ದಯಮಾಡಿ ಕೆಳಗಿನ ವಿಳಾಸಕ್ಕೆ ಬರೆಯಿರಿ

ಕಾರ್ಯನಿರ್ವಾಹಕ ನಿರ್ದೇಶಕರು ಹಾಗೂ ಸದಸ್ಯ ಕಾರ್ಯದರ್ಶಿ
**ಕರ್ನಾಟಕ ಜ್ಞಾನ ಆಯೋಗ**
**ಕರ್ನಾಟಕ ಸರ್ಕಾರ**
# 219, 2ನೇ ಮಹಡಿ, ವಿಧಾನಸೌಧ,
ಬೆಂಗಳೂರು – 560 001
ದೂರವಾಣಿ: 080 22033297 ಫ್ಯಾಕ್ಸ್: 080 22342695
ಇ–ಮೇಲ್: secy@jnanaayoga.in



